# ಅಂಬಳಿ: ಒಂದು ಸಾಂಸ್ಕೃತಿಕ ಅಧ್ಯಯನ

(ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಪ್ರೌಢಪ್ರಬಂಧ)

ಸಂಶೋಧಕರು

ನೋಂದಣಿ ಸಂಖ್ಯೆ : ೧೮೦೧೦೮೦೩೦೦೯





ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ – ೫೮೩ ೨೭೬

೨೦೧೯

# ಅಂಬಳಿ: ಒಂದು ಸಾಂಸ್ಕೃತಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸುತ್ತಿರುವ ಎಂ.ಫಿಲ್. ಪ್ರೌಢಪ್ರಬಂಧ)

ಸಂಶೋಧಕರು

ನೋಂದಣಿ ಸಂಖ್ಯೆ : ೧೮೦೧೦೮೦೩೦೦೦೯




ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ – ೫೮೩೨೭೬

೨೦೧೯

# ಪರಿವಿಡಿ

# ಅಧ್ಯಾಯ – ಒಂದು

## ಅಧ್ಯಯನದ ಉದ್ದೇಶ, ವ್ಯಾಪ್ತಿ, ಸ್ವರೂಪ, ವಿಧಾನ ಮತ್ತು ಸಮೀಕ್ಷೆ

### ಪ್ರಸ್ತಾವನೆ

ಮಾನವರಷ್ಟೇ ಹಳೆಯದು ಪಾರಂಪರಿಕ ಸಂಸ್ಕೃತಿ ಪ್ರಾಚೀನ ಕಾಲದಿಂದ ಇಂದಿನವರೆಗೆ ಮಾನವ ಜೀವನದ ಸಮಷ್ಟಿ ರೂಪದ ಜೀವನಾನುಭವಗಳು ಅವರ ಬದುಕಿನಲ್ಲಿ ಅಡಗಿವೆ. ಇದನ್ನು ಮಾನವ ಶಾಸ್ತ್ರಜ್ಞರು 'ಸಂಸ್ಕೃತಿ' ಎಂಬುದಾಗಿ ಪ್ರತಿಪಾದಿಸುತ್ತಾರೆ. ಇದು ಕಾಲ, ದೇಶ, ಜಾತಿ, ಜನಾಂಗ, ಭಾಷೆ ಮುಂತಾದವುಗಳಿಂದ ವೈವಿಧ್ಯಮಯವಾಗಿದೆ. ಸಂಸ್ಕೃತಿಯು ಸಾಂಸ್ಕೃತಿಕ ಸಂಬಂಧ ಮತ್ತು ಸಮಾಂತರತೆ ಬೆಳರಸಿರುವುವನ್ನು ಕಾಣಬಹುದು ಸಂಪ್ರದಾಯಗಳಿಂದ ಹಿಡಿದು ವೈಯಕ್ತಿಕವಾದ ಆಚರಣೆಗಳವರೆಗೂ ಮಾನವ ಸಮುದಾಯದ ವ್ಯಾಪ್ತಿ ಪಸರಿಸಿದೆ. ಮಾನವ ಜನಾಂಗದ ಇತಿಹಾಸವನ್ನು ಚಿತ್ರಿಸುವಾಗ ಬಳಸುವ ಇನ್ನೊಂದು ಪದವೇ 'ನಾಗರಿಕತೆ' ಆಂಗ್ಲ ಭಾಷೆಯಲ್ಲಿ ಅದನ್ನು ಕಲ್ಚರ್ ಮತ್ತು ಸಿವಿಲಿಜೇಶನ್ ಎಂದು ಕರೆಯಲಾಗಿದೆ. ಇವೆರಡು ಪದಗಳನ್ನು ಅನೇಕ ವೇಳೆ ವಿದ್ವಾಂಸರು ಸಮಾನಾರ್ಥಿಕವೆಂಬಂತೆ ಪ್ರಯೋಗಿಸಿರುವುದೂ ಉಂಟು. ನಾಗರಿಕತೆ ಎಂಬುದು ಭೌತಿದ ಸಾಧನೆಗಳಿಗೆ ಸಂಬಂಧಿಸಿದೆ ಆದರೆ ಸಂಸ್ಕೃತಿಯು ವೈಚಾರಿಕ, ಆಧ್ಯಾತ್ಮಿಕ ಮತ್ತು ತತ್ವಜ್ಞಾನ ಕ್ಷೇತ್ರದ ಸಾಧನೆ ಮತ್ತು ಸಿದ್ಧಿಯಾಗಿದೆ. ನಾಗರಿಕತೆ ಎಂಬುದು ನಗರ ಎಂಬುದರೊಡನೆ ಸಂಬಂಧವನ್ನು ಹೊಂದಿದ್ದಾರೆ, ಸಂಸ್ಕೃತಿಯು ಜನರ ಅಂತರಂಗದ ಜೀವನ ಶೈಲಿಯಾಗಿದೆ "ಸಂಸ್ಕೃತಿ" ಎಂಬ ಶಬ್ದ ಈಚೇಗೆ ಬಹುಮುಖ್ಯವಾದ ಅರ್ಥವನ್ನು ಪಡೆದು ಬೆಳೆಯುತ್ತಾಬಂದಿದೆ. ಹರ್ಸ್ ಕೊವಿಟ್ಸ್ ಹೇಳುವಂತೆ ' ಜನರ ಜೀವನ ವಿಧಾನವೇ ಸಂಸ್ಕೃತಿ' ಈ ಜನ ಯಾರಾದರು ಆಗಿರಬಹುದು; ಎಲ್ಲಾದರು ವಾಸಿಸಬಹುದು. ಜನರಿದ್ದ ಕಡೇ ಸಂಸ್ಕೃತಿ ಇದ್ದೇ ಇರುತ್ತದೆ. ಆದರೆ ಸಂಸ್ಕೃತಿ ಒಂದೇ ತೆರನಾದುದಲ್ಲ; ಒಂದು ವಿನ್ಯಾಸದಲ್ಲಿ ಒಂದು ಪ್ರದೇಶದ ಹಲವು ಜನಾಂಗಗಳಲ್ಲಿ ಅವರದ್ದೆ ರೀತಿಯ ಸಂಸ್ಕೃತಿ ಇರಲು ಸಾಧ್ಯವಿದೆ. ಸಂಸ್ಕೃತಿಯು ಜನತೆಯ ಧರ್ಮ, ಮೌಲ್ಯ, ಕಲೆ, ಸಾಹಿತ್ಯ, ರಾಜಕೀಯ ವಿಧಾನ, ಉಡುಗೆ-ತೊಡುಗೆ, ಆಹಾರ ವಿಧಾನಗಳು, ಉದ್ಯೋಗ, ಆರ್ಥಿಕ ಸ್ಥಿತಿ, ಕಾನೂನು, ಆಚರಣೆ ಇತ್ಯಾದಿ ಎಲ್ಲಾವನ್ನು ಒಳಗೊಳ್ಳುತ್ತವೆ. ಒಂದು ಪ್ರದೇಶದ ಸಾಂಸ್ಕೃತಿಕ ಇತಿಹಾಸದ ಅಧ್ಯಯನ ಎಂದರೆ ಅಲ್ಲಿ ಬಾಳಿದ ಜನರ ಬದುಕಿನ ಅಧ್ಯಯನವೆಂದೇ ಅರ್ಥ. ಆ ಜನರ ನೋವು-ನಲಿವು, ಆಚಾರ-ವಿಚಾರ, ವ್ಯವಹಾರ ಮೊದಲಾದವೆಲ್ಲ ಅಲ್ಲಿ ಮಡುಗಟ್ಟಿರುತ್ತವೆ. ಇಂತಹ ಜನತೆಯ ಜೀವನವನ್ನು ಕುರಿತಾದ ವಿಶ್ಲೇಷಣಾತ್ಮಕ ಅಧ್ಯಯನವೇ ಸಾಂಸ್ಕೃತಿಕ ಅಧ್ಯಯನ.

ಸಾಂಸ್ಕೃತಿಕ ಇತಿಹಾಸ ರಚಿಸುವಾಗ ಅಥವಾ ಇದನ್ನು ಗಮನಿಸುವ ರೀತಿಯಲ್ಲಿ ಬದಲಾವಣೆ ಯಾಗುತ್ತಿರುತ್ತದೆ. ಈ ಬದಲಾವಣೆ ಅವರವರ ಬೌದ್ಧಿಕ ಜ್ಞಾನವನ್ನು ಅವಲಂಬಿಸಿರುತ್ತದೆ. ಕರ್ನಾಟಕ ಮುಖ್ಯವಾದ ಅರಸು ಮನೆತನಗಳ ಇತಿಹಾಸ ಹೆಚ್ಚಿನವಾಗಿ ಪುರಾತತ್ವ ಕುರುಹುಗಳ ಮೇಲೆಯೇ ಅವಲಂಬಿಸಿದೆ ಈ ಹಿನ್ನೆಲೆಯನ್ನು ಆಧರಿಸಿ ಸೀಮಿತ ಪ್ರದೇಶವನ್ನು ಆಯ್ದುಕೊಂಡು ಅಧ್ಯಯನ ಮಾಡಿದ್ದಲ್ಲಿ ಗ್ರಾಮದ ಇತಿಹಾಸಕ್ಕೆ ಹೆಚ್ಚು ಮಹತ್ವ ನೀಡಿದಂತಾಗುತ್ತದೆ.

ಸಮಾಜವಿಜ್ಞಾನಿಗಳು ಮತ್ತು ಚಿಂತಕರು ಸಂಸ್ಕೃತಿ ಎಂಬ ಪದವನ್ನು ಬೇರೆ ಬೇರೆ ಸಂದರ್ಭದಲ್ಲಿ ಬೇರೆ ರೀತಿಯಲ್ಲಿ ಬಳಸುತ್ತಿರುತ್ತಾರೆ. ಆದರೆ ಮಾನವ ಸಮಾಜದ ವಿಕಾಸವನ್ನು ಅಧ್ಯಯನ ಮಾಡುವಾಗ ಆಯಾ ಸಂದರ್ಭದಲ್ಲಿ ಅನುಸರಿಸಿದ ಜೀವನ ವಿಧಾನಗಳ ಆಧಾರದಲ್ಲಿ ಮಾನವ ಸಂಸ್ಕೃತಿಯನ್ನು ವ್ಯಾಖ್ಯಾನಿಸಲು ಪ್ರಯತ್ನಿಸಲಾಗಿದೆ. ಮಾನವ ಅಲೆಮಾರಿ ಜೀವನ ನಡೆಸುತ್ತಿದ್ದಾಗ ಅನುಸರಿಸುತ್ತಿದ್ದ ಆಚರಣೆ ಮತ್ತು ಜೀವನ ಕ್ರಮಗಳ ಆಧಾರದಲ್ಲಿ ಸಂಸ್ಕೃತಿಯನ್ನು ವಿಶ್ಲೇಷಿಸುವ ಪ್ರಯತ್ನಗಳು ನಡೆದಿವೆಲ್ಲ ಆಹಾರಕ್ಕಾಗಿ ತಾನು ಸಹಜ ಮತ್ತು ಸ್ವಾಭಾವಿಕವಾಗಿ ಪ್ರಕೃತಿಯೊಡನೆ ಸಂಘರ್ಷ ನಡೆಸಿ ಪ್ರಕೃತಿಯಲ್ಲಿ ಸಹಜವಾಗಿ ಸಿಗುವ ಆಹಾರ ಪದಾರ್ಥಗಳನ್ನು ಹುಡುಕಿ, ಅಗೆದು, ಬೇಟೆಯಾಡಿ ಬದುಕುತ್ತಿದ್ದನು. ಇದನ್ನು ಸಾಂಸ್ಕೃತಿಕ ಚಿಂತಕರು 'ಬೇಟೆ' ಸಂಸ್ಕೃತಿಯೆಂದು ವಿವರಿಸುವ ಪ್ರಯತ್ನ ನಡೆಸಿದ್ದರೂ ಇದನ್ನು ಬಹುತೇಕ ಸಂದರ್ಭದಲ್ಲಿ ಬಳಸಲಾಗುತ್ತದೆ. ಅಂತಹ ಮಾನವ ಅಲೆಮಾರಿ ಸ್ಥಿತಿಯಿಂದ ನೆಲೆನಿಂತ ಸ್ಥಿತಿಗೆ ರೂಪಾಂತರವಾದಾಗ ಅನುಸರಿಸಿದ ಜೀವನಕ್ರಮ ನತ್ತು ಪದ್ಧತಿಗಳ ಆಧಾರದಲ್ಲಿ ಸಂಸ್ಕೃತಿಯನ್ನು ಅರ್ಥೈಸಲು ಪ್ರಯತ್ನ ಮಾಡಲಾಗಿದೆ ಅಂದರೆ ಮಾನವ ನೆಲೆನಿಂತರಂತೆ ಬದುಕಲು ಅನುಸರಿಸಿದ ಕೃಷಿ ವಿಧಾನ ಮತ್ತು ಪದ್ಧತಿಯ ಆಧಾರದಲ್ಲಿ ಅದನ್ನು ಕೃಷಿ ಸಂಸ್ಕೃತಿ ಎಂದು ಕರೆದರೆ. ಅದಕ್ಕಿಂತ ಪೂರ್ವದಲ್ಲಿ ಬದುಕಿಗಾಗಿ ಅನುಸರಿಸಿದ ಪಶುಪಾಲನೆಯನ್ನು ಪಶುಪಾಲನೆ ಸಂಸ್ಕೃತಿಯೆಂದು ವ್ಯಾಖ್ಯಾನಿಸುವ ಪ್ರಯತ್ನವನ್ನು ಶೈಕ್ಷಣಿಕ ವಲಯ ಮಾಡಿದೆ ಹೀಗೆ ಪಶುಪಾಲನೆಯ ನಂತರ ಒಂದೆಡೆ ನೆಲೆನಿಂತು ಗುಂಪುಗಳು ಸಮುದಾಯಗಳು ವೃತ್ತಿಯಾಧಾರಿತ ವರ್ಗಗಳಾಗಿ ಭೂ ಮಾಲೀಕತ್ವದ ಸ್ವರೂಪ ಪಡೆದುಕೊಂಡ ಸಂಸ್ಕೃತಿಯನ್ನು ಗ್ರಾಮಸಂಸ್ಕೃತಿಯೆಂದು ವ್ಯಾಖ್ಯಾನಿಸಲಾಯಿತು. ನಂತರ ಆಧುನಿಕತೆಯ ಪ್ರಭಾವ, ಆಧುನಿಕ ಶೈಕ್ಷಣಿಕ ಸಂಸ್ಥೆಗಳ ಜೊತೆಗಿನ ವ್ಯವಹಾರ ಮತ್ತು ಪಾಶ್ಚಿವಾತ್ಯ ಜಗತ್ತಿನ ಕೊಡುಕೊಳ್ಳುವಿಕೆಯು ಬದುಕಿಗೆ ಆಧುನಿಕತೆಯ ಲೇಪನವನ್ನು ನೀಡಿ ಹಳೆಯ ನಂಬಿಕೆಗಳು ಹೊಸ ರೂಪದಲ್ಲಿ ಪ್ರಾರಂಭಿಸಲಾಯಿತು ಇದನ್ನು ಆಧುನಿಕ ಕಾಲಘಟ್ಟದ ಸಂಸ್ಕೃತಿ ಎಂದು ಕರೆಯಲಾಗಿದೆ.

ಇದೊಂದು ವಸ್ತುನಿಷ್ಠ ಅಧ್ಯಯನವೂ ಆಗುತ್ತದೆ, ಈ ಹಿನ್ನೆಲೆಯಲ್ಲಿ ಪ್ರಸ್ತುತ ಕೊಟ್ಟೂರು ತಾಲೂಕಿನ ಅಂಬಳಿ ಗ್ರಾಮವನ್ನು ಸೀಮಿತವಾಗಿರಿಸಿಕೊಂಡು "ಅಂಬಳಿ ಪರಿಸರ: ಸಾಂಸ್ಕೃತಿಕ ಅಧ್ಯಯನ" ಎಂಬ ಶೀರ್ಷಿಕೆಯ ಅಡಿಯಲ್ಲಿ ವಸ್ತುನಿಷ್ಠವಾಗಿ ಅಧ್ಯಯನ ಮಾಡಿದ ಪ್ರಯತ್ನ ಇದಾಗಿದೆ.

## ೧.೧ ಅಧ್ಯಯನದ ಉದ್ದೇಶ

ಪ್ರಸ್ತುತ ಅಧ್ಯಯನದ ಮುಖ್ಯ ಉದ್ದೇಶ ಈ ಗ್ರಾಮದ ಒಟ್ಟಾರೆ ಸಾಂಸ್ಕೃತಿ ಸಂಗತಿಗಳನ್ನು ವ್ಯವಸ್ಥಿತವಾಗಿ ಕಟ್ಟಿಕೊಡುವ ಹಾಗೂ ಲಭ್ಯವಿರುವ ಆಧಾರಗಳ ಹಿನ್ನಲೆಯಲ್ಲಿ ವಿಶ್ಲೇಷಿಸುವುದಾಗಿದೆ. ಇದುವರೆಗೆ ಈ ಗ್ರಾಮವನ್ನು ಕುರಿತು ಸಮಗ್ರವಾಗಿ ಸಂಶೋಧನಾತ್ಮಕ ಅಧ್ಯಯನಗಳು ನಡೆದಿಲ್ಲ. ಈ ವಿಷಯಕ್ಕೆ ಪೂರಕವಾಗಿ ಗ್ರಾಮದಲ್ಲಿರುವ ದೇವಾಲಯ, ಶಾಸನಗಳು, ಶಿಲ್ಪ ಕಲೆ, ಹಾಗೂ ಪುರಾತತ್ವ ಆಕರಗಳನ್ನು ಸಂಗ್ರಹಿಸಿ ಹಾಗೂ ವಿಶ್ಲೇಷಣೆಯ ಮೂಲಕ ಸ್ಥಳಿಯ ಚರಿತ್ರೆಯನ್ನು ಕಟ್ಟಿಕೊಡಲು ಪ್ರಯತ್ನಿಸಲಾಗಿದೆ.

ಸಂಶೋಧನೆಗೆ ಉದ್ದೇಶ ಬಹುಮುಖ್ಯ. ಉದ್ದೇಶವು ಅಧ್ಯಯನಕ್ಕೆ ಗುರಿ ಇದ್ದಂತೆ. ಅಧ್ಯಯನದ ಉದ್ದೇಶವನ್ನು ಸಾಧಿಸಿದರೆ ಗುರಿಯನ್ನು ಸಾಧಿಸಿದಂತೆ ಸಮಸ್ಯೆಯ ರೂಪದಲ್ಲಿ ಎತ್ತಿದ ಪ್ರಶ್ನೆಗಳಿಗೆ ಉತ್ತರ ಹುಡುಕುವ ಕೆಲಸವನ್ನು ಮಾಡುತ್ತದೆ. ಇದನ್ನೇ ಇನ್ನೊಂದು ವಿಧದಲ್ಲಿ ಹೇಳುವುದಾದರೆ ಅಧ್ಯಯನ ಏನನ್ನು ಶೋಧಿಸಲು ಅಥವಾ ಪರೀಕ್ಷಿಸಲು ಅಥವಾ ಅರ್ಥಮಾಡಿಕೊಳ್ಳಲು ಪ್ರಯತ್ನಿಸಿದೆ ಎನ್ನುವುದನ್ನು ಹೇಳುತ್ತದೆ.

ಈ ಗ್ರಾಮದಲ್ಲಿರುವ ದೇವಾಲಯಗಳು ಪ್ರಾಚೀನ ಸಂಸ್ಕೃತಿಯ ಪ್ರತೀಕಗಳಾಗಿವೆ. ಅವು ಕೇವಲ ಧಾರ್ಮಿಕ ಆರಾಧನಾ ಕೇಂದ್ರಗಳಾಗಿರದೆ ಅಂದಿನ ಕಾಲದ ಶಿಕ್ಷಣ ಕೇಂದ್ರವಾಗಿತ್ತೆಂದು ಶಾಸನದಿಂದ ತಿಳಿದುಬರುತ್ತದೆ. ಇವುಗಳಲ್ಲಿ ವಾಸ್ತುಶಿಲ್ಪ ಹಾಗೂ ಮೂರ್ತಿಶಿಲ್ಪಗಳು ಈ ಭಾಗದ ಸಂಸ್ಕೃತಿಯನ್ನು ಪ್ರತಿಬಿಂಬಿಸುತ್ತವೆನ್ನುವುದರಲ್ಲಿ ಯಾವ ಸಂಶಯವಿಲ್ಲ. ಇಂತಹ ವಿಷಯಗಳನ್ನು ಅವಶ್ಯಕತೆಗೆ ತಕ್ಕಂತೆ ವಿವೇಚಿಸುವ ಪ್ರಯತ್ನ ಮಾಡಲಾಗುವುದು.

ಒಟ್ಟಿನಲ್ಲಿ ಕರ್ನಾಟಕದ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ಕ್ಷೇತ್ರಗಳಲ್ಲಿ ಒಳಗಾಗಿರುವ ಈ ಗ್ರಾಮವು ವಿವರಣಾತ್ಮಕ ಹಾಗೂ ವಿಶ್ಲೇಷಣಾತ್ಮಕ ಅಧ್ಯಯನಗಳಿಗೆ ಒಳಪಡಿಸುವ ಮೂಲಕ ಇಲ್ಲಿನ ಸಾಂಸ್ಕೃತಿಕ ಚರಿತ್ರೆಯನ್ನು ಕಟ್ಟಿಕೊಡುವ ಪ್ರಯತ್ನದ ಜೊತೆಗೆ ಈ ಪ್ರದೇಶದಲ್ಲಿ ಈವರೆಗೆ ನಡೆದಿರುವ ಅಧ್ಯಯನದ ಜೊತೆಗೆ ಕ್ಷೇತ್ರಕಾರ್ಯ ಕೈಗೊಂಡು ಸಂದರ್ಶನಗಳ ಮೂಲಕ ಪ್ರಚಲಿತವಾಗಿರುವ ಐತಿಹ್ಯ ಮತ್ತು ಮೌಖಿಕ ಕಥನಗಳನ್ನು ದಾಖಲಿಸಿಕೊಳ್ಳಲಾಗಿದೆ. ಅಲ್ಲದೆ ಪ್ರಸ್ತುತ ಸಂಗ್ರಹಿತ ಸಂಪನ್ಮೂಲ ವ್ಯಕ್ತಿಗಳ ಮೂಲಕ ಸಮಗ್ರ ಚರಿತ್ರೆಯನ್ನು ಕಟ್ಟಿಕೊಡಲು ಪ್ರಯತ್ನವನ್ನು ಪ್ರಸ್ತುತ ಸಂಪ್ರಬಂಧದಲ್ಲಿ ಮಾಡಲಾಗಿದೆ.

## ೧.೨ ಅಧ್ಯಯನದ ವ್ಯಾಪ್ತಿ

ಯಾವುದೇ ಸಂಶೋಧನೆಗೆ ಚೌಕಟ್ಟು ಬಹಳ ಮುಖ್ಯ. ಅದರಂತೆಯೇ ಒಂದು ಅಧ್ಯಯನಕ್ಕೆ ವ್ಯಾಪ್ತಿ ಇರಬೇಕು. ಈ ಮಿತಿಯಲ್ಲಿ ಅಧ್ಯಯನ ಕೈಗೊಂಡಾಗ ಮಾತ್ರ ಪರಿಪೂರ್ಣವಾಗುತ್ತದೆ. ಈ ಚೌಕಟ್ಟಿನ ಕ್ರಮಬದ್ಧತೆಯಿಂದಾಗಿ ಸ್ಪಷ್ಟವಾದ ಇತಿಹಾಸವನ್ನು ರಚಿಸಲು ಸಾಧ್ಯವಾಗುತ್ತದೆ.

ಅಧ್ಯಯನದ ವ್ಯಾಪ್ತಿ ನಿರ್ದಿಷ್ಟ ಹಾಗೂ ಉದ್ದೇಶಪೂರಿತ ಸಂಶೋಧನೆಯ ಯಶಸ್ವಿಗೆ ಇದು ತುಂಬಾ ಸಹಾಯಕವಾಗಿರುತ್ತದೆ. ಹಾಗಾಗಿ ಪ್ರಸ್ತುತ ಅಂಬಳಿ ಗ್ರಾಮದ ಸಾಂಸ್ಕೃತಿಕ ಅಧ್ಯಯನದ ವ್ಯಾಪ್ತಿಯನ್ನು ಭೌಗೋಳಿಕವಾಗಿ ಅಂಬಳಿ ಗ್ರಾಮವನ್ನು ಮಾತ್ರ ಅಧ್ಯಯನಕ್ಕೆ ಹೆಚ್ಚಾಗಿ ಬಳಸಿಕೊಳ್ಳಲಾಗಿದೆ. ವಿಷಯಕ್ಕೆ ಪೂರಕ ಮಾಹಿತಿಗಳ ಅವಶ್ಯಕತೆಗೆ ಅನುಗುಣವಾಗಿ ಇನ್ನಿತರ ಪ್ರದೇಶದ ವಿವರಗಳನ್ನು ಸಹ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಪ್ರಾಚೀನ ಕಾಲದಿಂದ ಆಧುನಿಕ ಕಾಲದವರೆಗೂ ಅಧ್ಯಯನವನ್ನು ಕೈಗೊಂಡು ಒಂದು ಗ್ರಾಮವನ್ನು ಕುರಿತು ದೀರ್ಘಕಾಲಾವಧಿಯ ಅಧ್ಯಯನ ಮಾಡುವ ಪ್ರಯತ್ನ ಇಲ್ಲಿಯದು.

## ೧.೩ ಅಧ್ಯಯನದ ಸಮೀಕ್ಷೆ

ಸಂಶೋಧನಾ ಅಧ್ಯಯನಕ್ಕೆ ಯಾವುದೇ ಒಂದು ವಿಷಯವು ಆಯ್ಕೆ ಮಾಡಿಕೊಂಡಾಗ ಮೊಟ್ಟ ಮೊದಲು ಮಾಡಬೇಕಾದಂತಹ ಪ್ರಮುಖ ಕಾರ್ಯ ಆಯ್ಕೆಯಾದ ವಿಷಯದ ಅಧ್ಯಯನಕ್ಕೆ ಸಂಬಧಿಸಿದಂತೆ ಇದುವರೆಗೆ ಯಾವ ಯಾವ ವಿಷಯದ ಮೇಲೆ ಸಂಶೋಧನೆ ನಡೆಸಿದ್ದಾರೆ. ಸಂಶೋಧನೆಯ ಉದ್ದೇಶವೇನಾಗಿತ್ತು ಮತ್ತು ಫಲಿತಾಂಶದ ವರದಿಗಳನ್ನು ಸಮೀಕ್ಷಿಸಿ. ಈ ಅಧ್ಯಯನದ ಉದ್ದೇಶಕ್ಕಾಗಿ ವರದಿ ಮಾಡಿಕೊಳ್ಳುವುದು ಅಧ್ಯಯನಕಾರನ ಕರ್ತವ್ಯವಾಗಿರುತ್ತದೆ. ಕೃತಿ ರಚನಕಾರನು ಮೊದಲು ಕೈಗೊಳ್ಳಬೇಕಾದಂತಹ ಕಾರ್ಯ ಚಟುವಟಿಕೆಗಳಾಗಿರುತ್ತದೆ. ಆಯ್ಕೆ ಮಾಡಿಕೊಂಡ ವಿಷಯದ ಬಗ್ಗೆ ಇದುವರೆಗೂ ಪ್ರಕಟವಾದಂತಹ ಅಧ್ಯಯನಗಳು, ವರದಿಗಳು, ಲೇಖನಗಳು ಹೊರತಾಗಿ ಯಾವ ಹೊಸ ಹೊಸ ಅಂಶಗಳನ್ನು ಅಧ್ಯಯನದಲ್ಲಿ ಹೇಳುತ್ತೇ ಎನ್ನುವುದು ಬಹಳ ಪ್ರಮುಖವಾಗಿದೆ.

ಈವರೆಗೆ ಅಂಬಳಿಯನ್ನು ಒಳಗೊಂಡಂತೆ ಕೊಟ್ಟೂರು ತಾಲೂಕಿನ ಬಗ್ಗೆ ಪೂರ್ಣ ಪ್ರಮಾಣದಲ್ಲಿ ವ್ಯವಸ್ಥಿತ ಅಧ್ಯಯನಗಳು ನಡೆದುಬಂದಿರುವುದು ತೀರಾ ವಿರಳ. ಆದರೆ ಈ ಪರಿಸರದ ಕುರಿತಾಗಿ ಕೆಲ ವಿಚಾರಗಳ ಬಗ್ಗೆ ಬಿಡಿ ಬಿಡಿಯಾಗಿ ಅಲ್ಲಲ್ಲಿ ನಡೆದಿರುವ ಅಧ್ಯಯನಗಳು ಕಾಣಸಿಗುತ್ತವೆ. ಅವು ಈ ಕೆಳಗಿನಂತಿವೆ.

ಸೌತ್ ಇಂಡಿಯನ್ ಇನ್ಸಕ್ರಿಪ್ಷನ್ ಸಂಪುಟ-೧೧ರಲ್ಲಿ ಅಧ್ಯಯನ ಪ್ರದೇಶದಲ್ಲಿನ ಶಾಸನಗಳ ಕುರಿತು ವರದಿಗಳು ಪ್ರಕಟವಾಗಿದೆ.

ಅನ್ಯುಲ್ ರಿಪೋಟ್ ಆನ್ ಸೌತ್ ಇಂಡಿಯನ್ ಎಫಿಗ್ರಾಫಿ ಗಳಲ್ಲಿ ಅಧ್ಯಯನ ಪ್ರದೇಶದಲ್ಲಿನ ಶಾಸನಗಳ ಕುರಿತ ವರದಿಗಳು ಪ್ರಕಟವಾಗಿವೆ.

ಸತ್ಯನ್ ಬಿ.ಎನ್. ಅವರು ೧೯೬೪ರಲ್ಲಿ 'ಬಳ್ಳಾರಿ ಜಿಲ್ಲೆ ಗೆಜೆಟಿಯರ್' ನಲ್ಲಿ ಅಧ್ಯಯನ ಪ್ರದೇಶದಲ್ಲಿನ ಭೌಗೋಳಿಕ, ಐತಿಹಾಸಿಕ, ಮತ್ತು ಪ್ರಮುಖ ಗ್ರಾಮಗಳ ವಿವರಗಳನ್ನು ಗುರುತಿಸಿದ್ದಾರೆ.

ಚನ್ನಬಸಪ್ಪ ಎಸ್, ಪಾಟೀಲ ಮತ್ತು ವಿನೋದಾ ಪಾಟೀಲರವರು 'ಕರ್ನಾಟಕ ಶಾಸನಗಳು ಸಂಪುಟ ೨ರಲ್ಲಿ' ಬಳ್ಳಾರಿ ಜಿಲ್ಲೆಯ ಶಾಸನಗಳು ಎಂಬ ಶಾಸನ ಸಂಪುಟದಲ್ಲಿ ಕೊಟ್ಟೂರು ತಾಲೂಕಿನ ೫೨ ಶಾಸನಗಳನ್ನು ಅಧ್ಯಯನ ಮಾಡಿ ಪ್ರಕಟಿಸಿದ್ದಾರೆ.

ದೇವರಕೊಂಡಾರೆಡ್ಡಿ, ಕಲವೀರ ಮನ್ವಾಚಾರ್, ಭಟ್‌ಸೂರಿ ಕೆ.ಜಿ. ಮತ್ತು ಪರಮಶಿವಮೂರ್ತಿ ಡಿ.ವಿ., ಅವರ ಸಂಪಾದಿತ 'ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೧ ಬಳ್ಳಾರಿ ಜಿಲ್ಲೆ' ಎಂಬ ಶಾಸನ ಸಂಪುಟದಲ್ಲಿ ಹಗರಿಬೊಮ್ಮನಹಳ್ಳಿ ತಾಲೂಕಿನ ೪೨ ಶಾಸನಗಳನ್ನು ಅಧ್ಯಯನ ಮಾಡಿ ಪ್ರಕಟಿಸಿದ್ದಾರೆ.

ಸುರೇಶ್ ಕೆ.ಎಂ., ವಾಸುದೇವ ಬಡಿಗೇರ, ಮಾಡಲಗೇರಿ ಕೊಟ್ರೇಶ್ ಮತ್ತು ಸೋಮಶೇಖರ್ ಎಸ್.ವೈ., ಅವರುಗಳ 'ಕರ್ನಾಟಕ ದೇವಾಲಯ ಕೋಶಃ ಬಳ್ಳಾರಿ ಜಿಲ್ಲೆ'

ಎಂಬ ಸಂಪುಟದಲ್ಲಿ ಅಧ್ಯಯನ ಪ್ರದೇಶದಲ್ಲಿನ ದೇವಾಲಯಗಳ ಬಗ್ಗೆ ಸಂಕ್ಷಿಪ್ತವಾಗಿ ತಿಳಿಸಿಕೊಟ್ಟಿದ್ದಾರೆ.

ವಾಸುದೇವ ಬಡಿಗೇರ ಅವರು 'ಬಳ್ಳಾರಿ ಪರಿಸರದ ಸಾಂಸ್ಕೃತಿದ ಪರಂಪರೆ ಭಾಗ-೧ ಎಂಬ ಕೃತಿಯಲ್ಲಿ ಬಳ್ಳಾರಿ ಜಿಲ್ಲೆಯ ಭೌಗೋಳಿಕತೆ, ಪ್ರಾಗಿತಿಹಾಸ, ಪೌರಾಣಿಕ ಹಿನ್ನಲೆ, ರಾಜಕೀಯ, ಆಡಳಿತ, ಸಾಮಾಜಿಕ, ಆರ್ಥಿಕ, ಧಾರ್ಮಿಕ, ದೇವಾಲಯ ಮತ್ತು ಮೂರ್ತಿಶಿಲ್ಪಗಳ ಕುರಿತು ಅಧ್ಯಯನ ಮಾಡಿದ್ದಾರೆ.

ನಾಗಯ್ಯ ಜೆ.ಎಂ. ಅವರು 'ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ' ಎಂಬ ಕೃತಿಯಲ್ಲಿ ಆಡಳಿತ ವಿಭಾಗಗಳು, ಆಳುವ ಪ್ರಭುಗಳು, ಚಕ್ರವರ್ತಿಗಳು, ಮಹಾಮಂಡಳೇಶ್ವರರು, ಮಹಾಸಾಮಂತರು, ಪ್ರಭುಗಾವುಂಡರು, ಗಾವುಂಡರು, ಆಡಳಿತಾಧಿಕಾರಿಗಳು, ಇತರ ಅಧಿಕಾರಿಗಳ ಕುರಿತು ಅಧ್ಯಯನ ಮಾಡಿದ್ದಾರೆ.

ವಿರೂಪಾಕ್ಷಿ ಪೂಜಾರಹಳ್ಳಿ ಅವರು 'ಬಳ್ಳಾರಿ ಜಿಲ್ಲೆಯ ಪಾಳೆಯಗಾರರು' ಎಂಬ ಕೃತಿಯಲ್ಲಿ ಅಧ್ಯಯನ ಪ್ರದೇಶದಲ್ಲಿನ ಗುಡೇಕೋಟೆ ಪಾಳೆಯಗಾರರು, ಜರಿಮಲೆ ಪಾಳೆಯಗಾರರು ಮತ್ತು ಹರಪ್ಪನಹಳ್ಳಿ ಪಾಳೆಯಗಾರರು ಕುರಿತು ಅಧ್ಯಯನ ಮಾಡಿದ್ದಾರೆ.

ಪರಮೇಶ್ವರಯ್ಯ ಸೊಪ್ಪಿನಮಠ ಅವರು 'ಹಗರಿಬೊಮ್ಮನಹಳ್ಳಿ ತಾಲೂಕು ದರ್ಶನ' ಎಂಬ ಕೃತಿಯಲ್ಲಿ ತಾಲೂಕಿನ ಭೌಗೋಳಿಕ ಪರಿಚಯ, ಐತಿಹಾಸಿಕ ಹಿನ್ನಲೆ. ಆರ್ಥಿಕ ಸ್ಥಿತಿಗತಿ, ವಿದ್ಯಾಭ್ಯಾಸ, ಸಾಹಿತ್ಯ, ಸಂಗೀತ, ಜನಪದ-ರಂಗ-ಕಲೆ. ಸಂಘ-ಸಂಸ್ಥೆಗಳ ಕುರಿತು ಅಂಶಗಳನ್ನು ನಿರೂಪಿಸಿದ್ದಾರೆ.

ಪ್ರೇಮಾನಂದ ಬಿ. ಅವರು ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿರುವ 'ಕೋಗಳಿ ಆಂಜನೇಯ ಸಂಕಥನ' ಎಂಬ ಎಂ.ಫಿಲ್ ಸಂಪ್ರಬಂಧದಲ್ಲಿ ಸಲ್ಲಿಸಿರುತ್ತರೆ. ಕೋಗಳಿ ಗ್ರಾಮದ ಭೌಗೋಳಿಕ ಹಿನ್ನೆಲೆ, ಜನಸಂಖ್ಯೆ, ಸ್ಥಳನಾಮ, ಚಾರಿತ್ರಿಕ ಹಿನ್ನೆಲೆ, ಆಂಜನೇಯಸ್ವಾಮಿಯ ಹಿನ್ನಲೆ, ದೇವಾಲಯ ಸ್ಥಾಪನೆ, ಆಸ್ತಿ ಮತ್ತು ಆಡಳಿತ, ಆಚರಣೆ, ಜಾತ್ರೆ, ಗಾದೆ, ಕಥೆ, ಐತಿಹ್ಯ, ಕಾವ್ಯ ಕುರಿತು ಸಂಕ್ಷಿಪ್ತವಾಗಿ ಅಧ್ಯಯನ ಮಾಡಿದ್ದಾರೆ.

ಹೀಗೆ ಕೊಟ್ಟೂರು ತಾಲೂಕನ್ನು ಕುರಿತಂತೆ ಅಧ್ಯಯನಗಳು, ಲೇಖನಗಳು, ಗ್ರಂಥಗಳು, ಪತ್ರಿಕಾವರದಿಗಳು, ಇತಿಹಾಸ, ಸಂಸ್ಕೃತಿ ಬಗ್ಗೆ ಕೆಲವು ಕೃತಿಗಳು ಪ್ರಕಟವಾಗಿದ್ದರೂ ಅವು ನಿರ್ದಿಷ್ಟವಾದ ಒಂದು ವಿಷಯವನ್ನು ಅಥವಾ ಒಂದು ಸ್ಥಳವನ್ನು ಸಂಗತಿಯನ್ನು ಕುರಿತು ಚರ್ಚಿಸಿವೆ. ಹೀಗೆ ಇಡೀ ಅಂಬಳಿ ಗ್ರಾಮವನ್ನು ಗಮನದಲ್ಲಿಟ್ಟುಕೊಂಡು ಈ ಗ್ರಾಮದಲ್ಲಿ ಬಗ್ಗೆ ದೊರೆಯುವ ಎಲ್ಲಾ ಆಕರಗಳನ್ನು ಬಳಸಿಕೊಂಡು ನಡೆಸಿರುವ "ಅಂಬಳಿ; ಒಂದು ಸಾಂಸ್ಕೃತಿಕ ಅಧ್ಯಯನ" ಎಂಬ ಶೀರ್ಷಿಕೆ ಅಡಿಯಲ್ಲಿ ಸಾಂಸ್ಕೃತಿಕ ಹಿನ್ನೆಲೆಯನ್ನು ಒಳಗೊಂಡು ಈ ಅಧ್ಯಯನವವನ್ನು ಕೈಗೊಳ್ಳಲಾಗಿದೆ.

## ೧.೪ ಅಧ್ಯಯನದ ವಿಧಾನ

ಒಂದು ಕಾರ್ಯ ಯಶಸ್ವಿಯಾಗಬೇಕಾದರೆ ಕ್ರಮಬದ್ಧತೆ ಅತಿಮುಖ್ಯ ಹಾಗಾಗಿ ಸಂಶೋಧನ ಕಾರ್ಯಕ್ಕೂ ವ್ಯವಸ್ಥಿತ ಅಧ್ಯಯನ ಬಹಳ ಅವಶ್ಯಕವಾದದ್ದು. ಪ್ರಸ್ತುತ ಅಧ್ಯಯನದಲ್ಲಿ ಕ್ಷೇತ್ರಕಾರ್ಯ ವಿಧಾನವನ್ನು ವಿಶೇಷವಾಗಿ ಬಳಸಿಕೊಳ್ಳಲಾಗಿದೆ. ಅಂಬಳಿ ಗ್ರಾಮಕ್ಕೆ ನೇರವಾಗಿ ಭೇಟಿ ಮಾಡಿ, ಅಲ್ಲಿ ದೊರೆತಿರುವ ಐತಿಹಾಸಿಕ ಮತ್ತು ಸಾಹಿತ್ಯಿಕ ಆಕರಗಳನ್ನು ದಾಖಲಿಸಿಕೊಳ್ಳುವುದರ ಜತೆಗೆ ಮೌಖಿಕ ಕಥನಗಳನ್ನು ಹಾಗೂ ಐತಿಹ್ಯಗಳನ್ನು ಸ್ಥಳೀಯ ಸಂಪನ್ಮೂಲ ವ್ಯಕ್ತಿಗಳೊಂದಿಗೆ ಚರ್ಚಿಸಿ ಸಂಗ್ರಹಿಸಲಾಗಿದೆ. ಅಧ್ಯಯನಕ್ಕೆ ಪೂರಕವಾಗಿ ದೊರೆತಿರುವ ಪ್ರಾಥಮಿಕ ಮತ್ತು ಆನುಷಂಗಿಕ ಆಕರಗಳನ್ನು ಸಂಗ್ರಹಿಸಿ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಪ್ರಚಲಿತದಲ್ಲಿರುವ ಇತಿಹಾಸ ಮತ್ತು ಸಾಂಸ್ಕೃತಿಕ ಅಧ್ಯಯನದ ವಿಧಾನಗಳನ್ನು ಅಳವಡಿಸಿಕೊಂಡು ಚಾರಿತ್ರಿಕ ಮತ್ತು ಸಾಂಸ್ಕೃತಿಕ ಆಕರಗಳನ್ನು ವಿಷಯಾನುಸಾರ ವಿಶ್ಲೇಷಿಸಿ, ಚರ್ಚಿಸಿ ಫಲಿತಾಂಶಗಳನ್ನು ಕಂಡುಕೊಳ್ಳಲಾಗಿದೆ. ವೈಜ್ಞಾನಿಕವಾಗಿ ಮತ್ತು ವಸ್ತುನಿಷ್ಠವಾದ ವಿಧಾನಗಳನ್ನು ಈ ಸಂಪ್ರಬಂಧದ ರಚನೆಯಲ್ಲಿ ಪ್ರಾಮಾಣಿಕವಾಗಿ ಕಟ್ಟಿಕೊಡಲು ಪ್ರಯತ್ನಿಸಲಾಗಿದೆ. ಕೊನೆಯಲ್ಲಿ ಗ್ರಂಥಋಣ, ನಕ್ಷೆಗಳು, ಛಾಯಾಚಿತ್ರಗಳ ವಿವರಗಳನ್ನು ನೀಡಲಾಗಿದೆ

## ೧.೫ ಅಧ್ಯಯನದ ಸ್ವರೂಪ

ಪ್ರಸ್ತುತ ಅಧ್ಯಯನದ ಉದ್ದೇಶ, ವ್ಯಾಪ್ತಿ ಅಂಶಗಳ ಹಿನ್ನಲೆಯಲ್ಲಿ ಈ ಸಂಪ್ರಬಂಧವನ್ನು ಅಧ್ಯಯನದ ಅನುಕೂಲಕ್ಕಾಗಿ ಆರು ಅಧ್ಯಾಯಗಳನ್ನಾಗಿ ವಿಭಾಗಿಸಲಾಗಿದೆ.

ಮೊದಲನೇ ಅಧ್ಯಾಯದಲ್ಲಿ ಪ್ರಸ್ತಾವನೆ, ಅಧ್ಯಯನದ ಉದ್ದೇಶ, ವ್ಯಾಪ್ತಿ, ಸಮೀಕ್ಷೆ, ವಿಧಾನ ಮತ್ತು ಸ್ವರೂಪವನ್ನು ಸ್ಪಷ್ಟಪಡಿಸಲಾಗಿದೆ.

ಎರಡನೇ ಅಧ್ಯಾಯದಲ್ಲಿ ಅಂಬಳಿ ಗ್ರಾಮದ ಭೌಗೋಳಿಕ ಅಂಶಗಳಾದ ಭೂ ವಿಸ್ತೀರ್ಣ, ಹವಾಗುಣ, ಜನಸಂಖ್ಯೆ, ಜಲಸಂಪತ್ತು, ಮುಂತಾದ ವಿಷಯಗಳನ್ನು ಬಳಸಿಕೊಳ್ಳಲಾಗಿದೆ. ಅಲ್ಲದೆ ಸ್ಥಳನಾಮದ ಕುರಿತು ತಿಳಿಸಲಾಗಿದೆ.

ಮೂರನೇ ಅಧ್ಯಾಯದಲ್ಲಿ ಪ್ರಾಗಿತಿಹಾಸ ಮತ್ತು ರಾಜಕೀಯ ಇತಿಹಾಸಕಾಲ ಮೌರ್ಯರು, ಶಾತವಾಹನರು, ಪಲ್ಲವರು, ಕದಂಬರು, ಗಂಗರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರು, ಕಲಚೂರಿಗಳು, ನೊಳಂಬರು, ಪಾಂಡ್ಯರು, ಸೇವುಣರು, ಹೊಯ್ಸಳರು, ವಿಜಯನಗರದ ಅರಸರು, ಪಾಳೆಯಗಾರರಾದ ಗುಡೇಕೋಟೆ ಪಾಳೆಯಗಾರರು, ಜರಿಮಲೆ ಪಾಳೆಯಗಾರರು, ಹರಪನಹಳ್ಳಿ ಪಾಳೆಯಗಾರರ ಕುರಿತು ಅಧ್ಯಯನ ಮಾಡಲಾಗಿದೆ.

ನಾಲ್ಕನೆಯ ಅಧ್ಯಯದಲ್ಲಿ ಅಂಬಳಿ ಗ್ರಾಮದಲ್ಲಿನ ಸ್ಮಾರಕಗಳನ್ನು ಕುರಿತು ಹಾಗೂ ದೇವಾಲಯಗಳು, ಶಾಸನಗಳು, ಮೂರ್ತಿ ಶಿಲ್ಪಗಳು, ವೀರಗಲ್ಲು ಮತ್ತು ಮಹಾಸತಿಗಲ್ಲು ವಿವರಣೆಯನ್ನು ತಿಳಿಸಲಾಗಿದೆ.

ಐದನೆಯ ಅಧ್ಯಾಯದಲ್ಲಿ ನಂಬಿಕೆ ಮತ್ತು ಆಚರಣೆಗೆ ಸಂಬಂಧಿಸಿದಾಗಿದ್ದು, ಅಧ್ಯಯನ ಪ್ರದೇಶದಲ್ಲಿ ಪ್ರಸ್ತುತ ಆಚರಣೆಯಲ್ಲಿರುವ ಹಬ್ಬ ಹರಿದಿನ ಜಾತ್ರೆ ಉತ್ಸವಗಳನ್ನು ಹಾಗೂ ಸ್ಥಳೀಯ ಜನ ಅಭಿಪ್ರಾಯಗಳ ಆಧಾರದಿಂದ ದಾಖಲಿಸಿಕೊಂಡು ನಂಬಿಕೆ ಆಚರಣೆಗಳನ್ನು ಕುರಿತಂತೆ ವಿಶ್ಲೇಷಿಸಲಾಗುವುದು.

ಆರನೇಯ ಅಧ್ಯಾಯವು ಸಮಾರೋಪವಾಗಿದ್ದು ಇದು ಇಡೀ ಅಧ್ಯಯನದಲ್ಲಿ ಕಂಡುಕೊಂಡ ಒಟ್ಟಾರೆ ಸಂಶೋಧನೆಯ ಫಲಿತಾಂಶಗಳ ಸಂಕ್ಷಿಪ್ತ ರೂಪವಾಗಿದೆ.

ಪ್ರಸ್ತುತ ಅಧ್ಯಾಯನಕ್ಕೆ ಬಳಸಿಕೊಂಡ ಕೃತಿ, ಲೇಖನ, ಶಾಸನ ಸಂಪುಟ, ಅಪ್ರಕಟಿತ ಸಂಶೋಧನ, ಪ್ರೌಢ ಪ್ರಬಂಧ ಮುಂತಾದ ವಿವರಗಳನ್ನು ಗ್ರಂಥಋಣದಲ್ಲಿ ನೀಡಲಾಗಿದೆ, ಅಧ್ಯಯನಕ್ಕೆ ಸಂಬಂಧಿಸಿದಂತೆ ಛಾಯಾಚಿತ್ರಗಳು, ಅಗತ್ಯ ನಕ್ಷೆಗಳನ್ನು ಅನುಬಂಧದಲ್ಲಿ ಅಳವಡಿಸಲಾಗಿದೆ.

# ಅಧ್ಯಾಯ – ಎರಡು

## ಭೌಗೋಳಿಕತೆ

ಪ್ರಪಂಚದ ಪ್ರತಿಯೊಂದು ರಾಷ್ಟ್ರ ಹಾಗೂ ಜನಸಮುದಾಯಗಳ ಮೇಲೆ ಭೌಗೋಳಿಕ ಪರಿಸರವು ತನ್ನದೇ ಆದ ಮಹತ್ವವನ್ನು ಹೊಂದಿದೆ. ಮಾನವನ ಜೀವನ ವೃತ್ತಾಂತಕ್ಕೂ ಮತ್ತು ಆತನು ವಾಸಿಸುವ ಪರಿಸರದ ಜ್ಞಾನ ಅತ್ಯವಶ್ಯಕವೆನ್ನಿಸುತ್ತದೆ. ಮಾನವನ ಇತಿಹಾಸವು ಆಯಾ ಪ್ರದೇಶಗಳ ಸ್ವಾಭಾವಿಕ ವಾತಾವರಣವನ್ನು ಅವಲಂಬಿಸಿರುತ್ತದೆ. ಮತ್ತು ಅವುಗಳು ಚರಿತ್ರೆಯ ಬರವಣಿಗೆಯಲ್ಲಿ ಸಹಕಾರಿಯಾಗಿವೆ. ಭೌಗೋಳಿಕ ಅಂಶಗಳ ಪ್ರದೇಶದ ಸನ್ನಿವೇಶಗಳನ್ನು ತಿಳಿಯಲು ಆ ಪ್ರದೇಶದ ಫಲವತ್ತಾದ ಮಣ್ಣಿನ ರಚನೆ, ಸಸ್ಯವರ್ಗ, ಪ್ರಾಣಿವರ್ಗ, ಹವಾಗುಣ, ಖನಿಜ ಸಂಪತ್ತು, ನದಿಮೂಲ, ಅರಣ್ಯ ಪ್ರದೇಶ, ಕಣಿವೆ, ಪರ್ವತ ಪ್ರದೇಶಗಳಾದ ಮೊದಲಾದ ಅಂಶಗಳನ್ನು ಗಮನಿಸಲಾಗುವುದು. ಈ ನಿಟ್ಟಿನಲ್ಲಿ ಕೊಟ್ಟೂರು ಪರಿಸರದ ಭೌಗೋಳಿಕ ಅಂಶಗಳನ್ನು ಕೆಳಕಂಡಂತೆ ತಿಳಿಸಲಾಗಿದೆ.

### ಬಳ್ಳಾರಿ ಜಿಲ್ಲೆ

ಕರ್ನಾಟಕದಲ್ಲಿ ಬಳ್ಳಾರಿ ಜಿಲ್ಲೆ ೧೪.೩೦–೧೫.೫೦ ಉತ್ತರ ಅಕ್ಷಾಂಶ ಮತ್ತು ೭೫.೪೦–೭೭.೧೧ ಪೂರ್ವ ರೇಖಾಂಶಗಳ ನಡುವೆ ಇದೆ. ಈ ಜಿಲ್ಲೆಯ ಪೂರ್ವಕ್ಕೆ ಆಂಧ್ರಪ್ರದೇಶದ ಅನಂತಪುರ ಹಾಗೂ ಕರ್ನೂಲ್, ಪಶ್ಚಿಮಕ್ಕೆ ಕೊಪ್ಪಳ, ನೈರುತ್ಯಕ್ಕೆ ದಾವಣಗೆರೆ, ದಕ್ಷಿಣಕ್ಕೆ ಚಿತ್ರದುರ್ಗ ಮತ್ತು ಉತ್ತರಕ್ಕೆ ರಾಯಚೂರು ಜಿಲ್ಲೆಗಳು ಗಡಿಗಳಾಗಿವೆ. ಬಳ್ಳಾರಿ ಪ್ರದೇಶವು ದಕ್ಷಿಣದಿಂದ ಉತ್ತರಕ್ಕೆ ಇಳಿಜಾರಾಗಿದ್ದು, ಬೆಟ್ಟದಿಂದಾವರಿಸಿದೆ. ಸಂಡೂರು, ಕೂಡ್ಲಿಗಿ, ಗುಡೇಕೋಟೆ, ಹೊಸಪೇಟೆ, ಕಂಪ್ಲಿ, ದರೋಜಿ. ಕುರುಗೋಡು, ಬಳ್ಳಾರಿ ಮುಂತಾದ ಸ್ಥಳಗಳಲ್ಲಿ ದೊಡ್ಡ ದೊಡ್ಡ ಬೆಟ್ಟಗಳಿವೆ. ಸಂಡೂರು ಕುಮಾರಸ್ವಾಮಿ ಬೆಟ್ಟ(೧.೩೬ಮೀ) ರಾಮನಮಲ್ಲೈ ಬೆಟ್ಟ(೯೯೨ಮೀ), ಜಂಬುನಾಥಗುಡ್ಡ(೯೦೮ಮೀ) ಎತ್ತರದ ಶಿಖರಗಳನ್ನು ಹೊಂದಿವೆ. ಕೂಡ್ಲಿಗಿ ಬೆಟ್ಟಗಳು ಎರಡು ಸಾಲುಗಳಲ್ಲಿವೆ. ಅವುಗಳಲ್ಲಿ ಒಂದು ಶ್ರೇಣಿ ಆನೇಕಲ್ಲುದುರ್ಗ(೭೨೪ಮೀ) ಇನ್ನೊಂದು ಜರಿಮಲೆ ಗುಡ್ಡ(೮೩೪ಮೀ) ಎತ್ತರದ ಶಿಖರಗಳನ್ನು ಹೊಂದಿವೆ. ಗುಡೇಕೋಟೆಯಿಂದ ಈಶಾನ್ಯಕ್ಕೆ ಹರಡಿರುವ ಗುಡೇಕೋಟೆ ಬೆಟ್ಟ ಚಿನ್ನಹಗರಿ ನದಿ ದಾಟಿ ಚಿತ್ರದುರ್ಗ ಜಿಲ್ಲೆಯ ಸೆರಗಿನಲ್ಲಿ ಹಾದು ಹೋಗುತ್ತದೆ. ಹಗರಿಬೊಮ್ಮನಹಳ್ಳಿ, ಹೂವಿನಹಡಗಲಿ ತಾಲೂಕುಗಳಲ್ಲಿಯ ಮಲ್ಲಪ್ಪನಗುಡ್ಡ(೯೭೮ಮೀ) ತುಂಗಭದ್ರಾ ನದಿ ದಂಡೆಯ ಹೊನ್ನೂರಿನ ಬಳಿ ಪ್ರಾರಂಭವಾಗಿ ಆಗ್ನೆಯ ಕಡೆಗೆ ಹಬ್ಬಿದೆ. ಮಲ್ಲಪ್ಪನ ಗುಡ್ಡದ ನೈರುತ್ಯಕ್ಕಿರುವ ಕಲ್ಲಪ್ಪನಗುಡ್ಡ ವಾಯುವ್ಯದಿಂದ ಈಶಾನ್ಯಕ್ಕೆ ಸಾಗಿದ್ದು, ಇದರಲ್ಲಿ ನರಸಿಂಹದೇವರ ಗುಡ್ಡ ಸೇರಿದಂತೆ ಉಚ್ಚಂಗಿಯಲ್ಲಿ ಕೊನೆಗೊಳ್ಳುತ್ತದೆ.[೧] ಪ್ರಸ್ತುತ ಅಧ್ಯಯನ ಪ್ರದೇಶ ಭೌಗೋಳಿಕ ಅಧ್ಯಯನ ಪ್ರದೇಶದ ಭೌಗೋಳಿಕ ಹಿನ್ನಲೆಯನ್ನು ಈ ಮುಂದಿನಂತೆ ವಿವರಿಸಲಾಗಿದೆ.

## ೨.೧ ಭೌಗೋಳಿಕ ಪರಿಸರ

ಬಳ್ಳಾರಿ ಜಿಲ್ಲೆಯ ತಾಲೂಕುಗಳಲ್ಲಿ ಒಂದಾಗಿರುವ ಕೊಟ್ಟೂರು ೨೦೧೮ರಲ್ಲಿ ಕೂಡ್ಲಿಗಿ ತಾಲೂಕಿನಿಂದ ಬೇರ್ಪಟ್ಟು ಹೊಸ ತಾಲೂಕಾಗಿ ರಚನೆಯಾಗಿದೆ. ಕೂಡ್ಲಿಗಿ ಮತ್ತು ಹಗರಿಬೊಮ್ಮನಹಳ್ಳಿ ತಾಲೂಕಿನ ಕೆಲವು ಗ್ರಾಮಗಳು ಸೇರಿ ಒಟ್ಟು ೬೩ ಗ್ರಾಮದಲ್ಲಿ ೨೯ ಕಂದಾಯ ಗ್ರಾಮಗಳಿಂದ[೨] ರಚನೆಯಾಗಿದ್ದು. ಪೂರ್ವದಲ್ಲಿ ಕೂಡ್ಲಿಗಿ ತಾಲೂಕಿನ ಪ್ರದೇಶಗಳು, ಪಶ್ಚಿಮದಲ್ಲಿ ಹರಪನಹಳ್ಳಿ ಮತ್ತು ಹೂವಿನ ಹಡಗಲಿ, ಉತ್ತರದಲ್ಲಿ ಹಗರಿಬೊಮ್ಮನಹಳ್ಳಿ, ದಕ್ಷಿಣದಲ್ಲಿ ದಾವಣಗೆರೆ ಜಿಲ್ಲೆಯ ಜಗಳೂರು ತಾಲೂಕುಗಳನ್ನು ಮೇರೆಯಾಗಿ ಹೊಂದಿದೆ.

ಭೌಗೋಳಿಕವಾಗಿ ಅಂಬಳಿ ಗ್ರಾಮವು ಕೋಗಳಿ ಹೋಬಳಿ ವ್ಯಾಪ್ತಿಗೆ, ಕೊಟ್ಟೂರು ತಾಲೂಕು ಪ್ರದೇಶಕ್ಕೆ ಒಳಪಟ್ಟಿದೆ. ತಾಲೂಕು ಪ್ರದೇಶದಿಂದ ೧೬ ಕೀ.ಮಿ. ದೂರದಲ್ಲಿರುವುದು, ಇಲ್ಲಿನ ಮಣ್ಣು ಫಲವತ್ತತೆಯಿಂದ ಕುಡಿದೆ. ಈ ಮಣ್ಣಿನಲ್ಲಿ ಜೋಳ, ಸಜ್ಜೆ, ನವಣೆ, ರಾಗಿ, ಭತ್ತ, ನೆಲಗಡಲೆ, ಮಡಿಕೆಕಾಳು, ಹೆಸರು, ಹಲಸಂದಿ ಮುಂತಾದ ಆಹಾರದ ಬೆಳೆಗಳನ್ನು ಬೆಳೆದು, ಕೊಟ್ಟೂರಿನ ಮಾರುಕಟ್ಟೆಯಲ್ಲಿ ಮಾರಾಟ ಮಾಡುತ್ತಾರೆ. ಹಾಗಾಗಿ ವ್ಯಾಪಾರಿಗಳು ಬಿಹಾರ, ರಾಜಸ್ಥಾನ, ಮುಂಬೈ ಹೀಗೆ ಬೇರೆ ಬೇರೆ ಪ್ರದೇಶಗಳಿಂದ ಬಂದು ಈ ಮೇಲಿನ ವಸ್ತುಗಳನ್ನು ಕರಿದಿಸುವುದರಿಂದ ಸುತ್ತ-ಮುತ್ತಲ್ಲಿನ ರೈತರಿಗೆ ಉತ್ತಮ ಮಾರುಕಟ್ಟೆಯಾಗಿದೆ. ಮತ್ತು ವಾಣಿಜ್ಯ ಬೆಳೆಗಳನ್ನು ಬೆಳೆಯಲು ರೈತರು ಆಸಕ್ತಿ ತೋರುತ್ತಿದ್ದಾರೆ.

### ಹವಾಗುಣ

ಹವಾಗುಣವು ಶುಷ್ಕವಾದರೂ ಆರೋಗ್ಯಕರವಾಗಿದ್ದು, ಸ್ವಲ್ಪ ಏರಿಳಿತಗಳಿಂದ ಕೂಡಿರುತ್ತದೆ. ಬಿಸಿಲಿನ ತಾಪ ಏಪ್ರಿಲ್ ತಿಂಗಳಲ್ಲಿ ಸಾಮಾನ್ಯವಾಗಿ ಅತಿಹೆಚ್ಚು ಉಷ್ಣಾಂಶವನ್ನು ಹೊಂದಿರುತ್ತದೆ. ನವೆಂಬರ್, ಡಿಸೆಂಬರ್ ತಿಂಗಳುಗಳು ಅತಿಹೆಚ್ಚು ತಂಪಾದ ತಿಂಗಳಾಗಿರುತ್ತವೆ. ಇನ್ನುಳಿದ ತಿಂಗಳುಗಳು ಸ್ವಲ್ಪ ಉಷ್ಣತೆ ಕಂಡುಬರುತ್ತದೆ. ಜೂನ್ ತಿಂಗಳಿನಿಂದ ಅಕ್ಟೋಬರ ತಿಂಗಳಿನವರೆಗೆ ಮುಂಗಾರು ಮಳೆಯೂ, ನವೆಂಬರ್ ತಿಂಗಳಿನಿಂದ ಡಿಸೆಂಬರ್ ತಿಂಗಳವರೆಗೆ ಹಿಂಗಾರು ಮಳೆಯು ಬೀಳುತ್ತದೆ. ಕೊಟ್ಟೂರು ತಾಲೂಕಿನಲ್ಲಿ ವಾರ್ಷಿಕ ವಾಡಿಕೆ ಮಳೆಯ ಪ್ರಮಾಣ ೫೪೪.[೩] ಮೀ.ಮೀ.ಗಳಷ್ಟು ಎಂದು ಮಳೆ ಮಾಪನ ಕೇಂದ್ರಗಳ ಮಾಹಿತಿಯಿಂದ ತಿಳಿದುಬಂದಿದೆ. ಹಾಗಾಗಿ ಬರಗಾಲವು ಇಲ್ಲಿಯ ಜನರನ್ನು ಕಾಡುತ್ತಿರುತ್ತದೆ. ಇದರ ಪರಿಣಾಮವಾಗಿ ಬಹಳಷ್ಟು ಬಡ ಜನರು ದುಡಿಮೆಗಾಗಿ ಮಲೆನಾಡು, ಬೆಂಗಳೂರು, ಗೋವಾ ಹಾಗೂ ಗಣಿ ಪ್ರದೇಶಗಳಿಗೆ ವಲಸೆ ಹೋಗುವುದು ಸಾಮಾನ್ಯವಾಗಿದೆ. ಈ ಪ್ರದೇಶದಲ್ಲಿ ೧ ವೃಷ್ಟಿಮಾಪನ (ಮಳೆ ಮಾಪನ) ಕೇಂದ್ರ ಪ್ರಸ್ತುತವಾಗಿ ಕಾರ್ಯನಿರ್ವಹಿಸುತ್ತಿದೆ ಎಂದು ತಿಳಿದುಬರುತ್ತದೆ.

### ಜನ ಸಮುದಾಯ

ಭೌಗೋಳಿಕ ವಿಶೇಷತೆ ಹೊಂದಿರುವ ಬಳ್ಳಾರಿ ಜಿಲ್ಲೆಯ ಕೆಲವೇ ತಾಲೂಕುಗಳಲ್ಲಿ ಹೊಸದಾಗಿ ಆಯ್ಕೆಯಾದ ಕೊಟ್ಟೂರು ತಾಲೂಕು ಒಂದು. ಅಂಬಳಿ ಗ್ರಾಮವು ಹಗರಿಬೊಮ್ಮನಹಳ್ಳಿ ತಾಲೂಕಿನಿಂದ ಬೇರ್ಪಟ್ಟು ಕೊಟ್ಟೂರು ತಾಲೂಕಿನ ವ್ಯಾಪ್ತಿಗೆ ಒಳಪಟ್ಟಿದೆ.

ಈ ಗ್ರಾಮದ ಜನರು ಅತಿ ಹೆಚ್ಚು ರೈತಾಪಿ ವರ್ಗಗಳಿದ್ದು ವ್ಯವಸಾಯವನ್ನೆ ಅವಲಂಬಿಸಿದ್ದಾರೆ. ಇಲ್ಲಿಯ ಜನರು ರಾಜಕೀಯವಾಗಿ, ಆರ್ಥಿಕವಾಗಿ, ಧಾರ್ಮಿಕವಾಗಿ ಹಾಗೂ ಸಾಮಾಜಿಕವಾಗಿ ಸದೃಢರಾಗಿದ್ದು, ಎಲ್ಲಾ ಸಮುದಾಯದ ಜನರು ಸದ್ಭಾವನೆಯಿಂದ ಜೀವನ ನಡೆಸುತ್ತಿದ್ದಾರೆ. ಅಂಬಳಿ ಗ್ರಾಮದಲ್ಲಿ ಒಟ್ಟು ೪೪೭ ಮನೆಗಳು ಇವೆ. ಇಲ್ಲಿನ ಜನಸಂಖ್ಯೆ ಒಟ್ಟು ೧೯೪೭ ಇದೆ. ಇದರಲ್ಲಿ ಗಂಡು ೧೦೦೮, ಹೆಣ್ಣು ೯೩೯ ಇದ್ದಾರೆ. ಈ ಗ್ರಾಮದಲ್ಲಿ ಕಂಡುಬರುವ ಸಮುದಾಯಗಳೆಂದರೆ. ಲಿಂಗಯಿತ, ರೆಡ್ಡಿ, ಜಂಗಮರು, ಅಕ್ಕಸಾಲಿ, ನಾಯಕ, ಕಮ್ಮಾರ, ಮಾದಿಗ, ಉಪ್ಪಾರ, ಕುಂಬಾರ, ನೇಕಾರ, ಛಲವಾದಿ, ಮುಸ್ಲಿಂ ಹಾಗೂ ಕ್ರಿಸ್ಚಿಯನ್ ಮತಾಂತರ ಹೊಂದಿದವರು ಇದ್ದಾರೆ. ಈ ಸಮುದಾಯಗಳಲ್ಲಿ ಲಿಂಗಾಯಿತ ಸಮುದಾಯವು ಅತೀ ಹೆಚ್ಚು ಜನಸಂಖ್ಯೆಯನ್ನು ಹೊಂದಿದೆ.[೪]

## ಜಲಮೂಲಗಳು

### ನದಿಗಳು

ಈ ಪ್ರದೇಶದಲ್ಲಿ ಹರಿಯುತ್ತಿರುವ ತುಂಗಭದ್ರಾ ನದಿ ಪಶ್ಚಿಮದಲ್ಲಿ ಹಾವೇರಿ, ಗದಗ, ಉತ್ತರದಲ್ಲಿ ಕೊಪ್ಪಳ-ರಾಯಚೂರು ಜಿಲ್ಲೆಗಳಿಗೆ ಗಡಿಯಾಗಿ ಪರಿಣಮಿಸಿದೆ. ತುಂಗಭದ್ರೆ ನದಿಗೆ ಬಂದು ಸೇರುವ ಹಗರಿ, ಚಿಕ್ಕ ಹಗರಿ ನದಿಗಳು ಪ್ರಾಚೀನ ಕಾಲದಿಂದಲೂ ಕೃಷಿ ಚಟುವಟಿಕೆಗಳಿಗೆ ನೀರನ್ನೊದಗಿಸುತ್ತಿವೆ.

### ತುಂಗಭದ್ರಾ ನದಿ

ಪಶ್ಚಿಮದಿಂದ ಪೂರ್ವಕ್ಕೆ ಹರಿಯುತ್ತಿರುವ ಇದು ಚಿಕ್ಕಮಗಳೂರು ಜಿಲ್ಲೆಯ ಪಶ್ಚಿಮ ಬೆಟ್ಟಸಾಲಿನ ಮರಾಹ ಪರ್ವತದಲ್ಲಿ ಉಗಮವಾದ ಎರಡು ನದಿಗಳು ಶಿವಮೊಗ್ಗ ಜಿಲ್ಲೆಯ ಕೂಡಲಿಯಲ್ಲಿ ಬಂದು ಸೇರುತ್ತವೆ. ಅವುಗಳಲಿ ಒಂದು ತುಂಗಾ ಇನ್ನೊಂದು ಭದ್ರಾ ಎರಡು ಕಲೆತು ಮುಂದೆ ಸಾಗಿದಾಗ ತುಂಗಭದ್ರಾ ಎಂದು ಕರೆಯಲಾಗಿದೆ. ಈ ನದಿಯ ಉಲ್ಲೇಖ ರಾಮಾಯಣ ಮತ್ತು ಪುರಾಣಗಳಲ್ಲಿ ಬಂದಿದೆ. ಮಹಾಭಾರತದಲ್ಲಿ ಜಾಹ್ನವಿ, ಕೃಷ್ಣವೇಣಿಗಳ ಜೊತೆಗೆ ತುಂಗಾವೇಣಿ ಎಂಬ ಹೆಸರು ಬರುತ್ತದೆ. ಇಂದಿಗೂ ಪವಿತ್ರ ಕ್ಷೇತ್ರವಾದ ಹಂಪಿಯಲ್ಲಿ ಈ ನದಿಗೆ ಪಂಪಾತೀರ್ಥವೆಂದೇ ಕರೆಯಲಾಗುತ್ತದೆ, ಇದರ ನೀರು ಬಲು ರುಚಿಕರವಾಗಿದ್ದು, 'ಗಂಗಾಸ್ನಾನ ತುಂಗಾಪಾನ' ಎಂಬ ನಾಣ್ಣುಡಿಯೇ ಬೆಳೆದು ಬಂದಿದೆ. ತುಂಗಾಭದ್ರಾ ನದಿ ಹೂವಿನ ಹಡಗಲಿ ತಾಲೂಕಿನಿಂದ ಬಳ್ಳಾರಿ ಪರಿಸರವನ್ನು ಪ್ರವೇಶಿಸುತ್ತದೆ. ಪಶ್ಚಿಮ, ಉತ್ತರ ಭಾಗದಕ್ಕಿ ಹರಿದಿರುವ ಇದು ಹರಪನಹಳ್ಳಿ, ಹಡಗಲಿ, ಹಗರಿಬೊಮ್ಮನಹಳ್ಳಿ, ಹೊಸಪೇಟೆ ಮತ್ತು ಸಿರಗುಪ್ಪ ತಾಲೂಕುಗಳನ್ನೊಳಗೊಂಡಂತೆ ೩೨೦ ಕಿ.ಮೀ. ಚಲಿಸಿ ಆಲೂರು ತಾಲೂಕಿನ ಕೂಡಲೂರು ಗ್ರಾಮದಲ್ಲಿ ಆಂಧ್ರಪ್ರದೇಶವನ್ನು ಸೇರುತ್ತದೆ.[೫]

## ಉಪನದಿಗಳು

ಜಲಸಂಪತ್ತು ಪ್ರಾಕೃತಿಕ ಸಂಪತ್ತಿನಲ್ಲಿ ಬಹು ಪ್ರಮುಖವಾಗಿದ್ದು, ಈ ಪ್ರದೇಶದಲ್ಲಿ ಹೆಸರಾಂತ ನದಿಗಳಿಲ್ಲವಾದರೂ ತುಂಗಭದ್ರೆಯ ಉಪನದಿಗಳಾದ ಚಿನ್ನಹಗರಿ ಮತ್ತು ಚಿಕ್ಕಹಗರಿ(ಜನಿಗಿಹಳ್ಳಗಳು) ಹರಿಯುತ್ತಿದ್ದು, ಅಲ್ಪ ಸ್ವಲ್ಪ ನೀರಾವರಿಗೆ ನೆರವಾಗಿವೆ. ಇವುಗಳಲ್ಲಿ ತುಂಗಭದ್ರಾ ನದಿಗೆ ಬಂದು ಸೇರುವ ಹಗರಿ, ಚಿಕ್ಕ ಹಗರಿಗಳಲ್ಲದೆ ಚಿಕ್ಕ ಹಗರಿಯನ್ನೊಳಗೊಂಡಂತೆ ಅನೇಕ ಹಳ್ಳಗಳು ಈ ಪ್ರದೇಶದಲ್ಲಿ ಹರಿಯುತ್ತವೆ. ತುಂಗಭದ್ರಾ ನದಿಯಂತೆ ಹಗರಿಯೂ ಚಿಕ್ಕಮಗಳೂರು ಜಿಲ್ಲೆಯ ಮಲ್ಲಯ್ಯನಗಿರಿ ಮತ್ತು ಥಂಗಲಿಯಲ್ಲಿಯ ಎರಡು ಸೆಳತಗಳನ್ನು ವೇದ ಮತ್ತು ಆವತಿ ಎಂದು ಕರೆಯಲಾಗಿದೆ. ಇವೆರಡೂ ಚಿತ್ರದುರ್ಗ ಜಿಲ್ಲೆಯಲ್ಲಿ ಸೇರಿ ವೇದಾವತಿ ಎಂದು ಕರೆಸಿಕೊಂಡು ನಂತರ ಬಳ್ಳಾರಿ ಜಿಲ್ಲೆಯನ್ನು (ರೂಪನಗುಡಿಯಲ್ಲಿ) ಪ್ರವೇಶಿಸುತ್ತದೆ. ಈ ಪ್ರದೇಶದ ಶಾಸನಗಳು ಇದನ್ನು 'ಹಗರಿ' 'ಅಗ-ಹರಿ' (ಅಘಹರಿ) (ಪಾಪವನ್ನು ತೊಳೆಯುವ) ಎಂದು ಕರೆದಿದೆ. ಈ ಪ್ರದೇಶದಲ್ಲಿ ೬೨.೮ ಕಿ.ಮೀ. ಸಾಗಿ ಸಿರುಗುಪ್ಪ ತಾಲೂಕಿನ ಸಿದ್ಧರಗಡ್ಡೆ ಹಳ್ಳಿಯಲ್ಲಿ ತುಂಗಭದ್ರಾ ನದಿಯನ್ನು ಸೇರುತ್ತದೆ. ವಿಶಾಲವಾಗಿ ಹರಿದಿರುವ ಈ ನದಿ ನೀರನ್ನು ಪ್ರಾಚೀನ ಕಾಲದಿಂದ ತೋಟ-ಗದ್ದೆಗಳಿಗೆ ಬಳಸಿಕೊಳ್ಳಲಾಗಿದೆ.[೬]

ತುಂಗಭದ್ರೆಯ ಇನ್ನೊಂದು ಉಪನದಿ ಚಿಕ್ಕಹಗರಿ ಚಿತ್ರದುರ್ಗ ಜಿಲ್ಲೆಯಲ್ಲಿ ಉಗಮವಾಗಿ, ಹರಪನಹಳ್ಳಿ ತಾಲೂಕಿನ ಅಂಜಿಗೇರಿಯಲ್ಲಿ ಈ ಪ್ರದೇಶವನ್ನು ಪ್ರವೇಶಿಸುತ್ತದೆ. ಹರಪನಹಳ್ಳಿ, ಹಡಗಲಿ, ಕೊಟ್ಟೂರು, ಹಗರಿಬೊಮ್ಮನಹಳ್ಳಿ ಮತ್ತು ಕೂಡ್ಲಿಗಿ ತಾಲೂಕುಗಳಲ್ಲಿ ಹರಿಯುತ್ತಿರುವ ಇದು ಒಟ್ಟು ೪೦ ಕಿ.ಮೀ. ಸಾಗಿ ತುಂಗಭದ್ರೆಯನ್ನು ಸೇರುತ್ತದೆ.[೭] ಈ ಚಿಕ್ಕಹಗರಿಯು ಅಂಬಳಿ ಗ್ರಾಮದ ಪಶ್ಚಿಮ ದಿಕ್ಕಿನಲ್ಲಿ ಹರಿಯುತ್ತಿದೆ. ಆದರು ಮಳೆಯ ಅಭಾವದಿಂದ ಇಂದಿನ ದಿನಗಳಲ್ಲಿ ಚಿಕ್ಕಹಗರಿ ಹಳ್ಳವು ಬತ್ತಿ ಹೋಗಿವೆ. ಸುತ್ತಮುತ್ತಲ್ಲಿನ ಪ್ರದೇಶವು ಬಂಜಾರು ಭೂಮಿಯಾಗಿ ಬದಲಾಗಿವೆ. ಈ ಚಿಕ್ಕಹಗರಿಯ ಕವಲು ದಾವಣಗೆರೆ ಜಿಲ್ಲೆಯ ಜಗಳೂರು ತಾಲೂಕಿನ ಭರವಸಾಗರದಲ್ಲಿ ಉಗಮವಾಗಿ ಕೊಟ್ಟೂರು ತಾಲೂಕಿನ ಕುಡಿತಿನಿ ಮಗ್ಗಿಯಿಂದ ಪ್ರವೇಶ ಮಾಡಿ ಸಂಗಮೇಶ್ವರ, ಅಲಬೂರು, ಮಾರ್ಗವಾಗಿ ಮಾಲವಿಗೆ ಬಂದು ತಲುಪುತ್ತದೆ.[೮] ಹಗರಿಬೊಮ್ಮನಹಳ್ಳಿ ಹತ್ತು ಕಿಲೋಮೀಟರ್ ದೂರವಿರುವ ಮಾಲವಿಯಲ್ಲಿ ಅಣೆಕಟ್ಟನ್ನು ಕಟ್ಟಲಾಗಿದೆ. ಈ ಚಿಕ್ಕಹಗರಿನದಿಗೆ ಅಣೆಕಟ್ಟನ್ನು ೧೯೫೫ರಲ್ಲಿ ಕಟ್ಟಲು ಪ್ರಾರಂಭಿಸಿ ೧೯೭೨ರವರೆಗೂ ನಡೆದು ಅದೇ ವರ್ಷ ಮೊದಲ ಬಾರಿಗೆ ರೈತರಿಗೆ ನೀರನ್ನು ಕಾಲುವೆಗಳ ಮೂಲಕ ಬಿಡಲಾಯಿತು. ಈ ಜಲಾಶಯವು ೨ ಟಿ.ಎಂ.ಸಿ ನೀರನ್ನು ಸಂಗ್ರಹಿಸಿಟ್ಟುಕೊಳ್ಳುವ ಸಾಮರ್ಥ್ಯವನ್ನು ಹೊಂದಿದ್ದು, ಸಮುದ್ರಟ್ಟದಿಂದ ೫೧೯.೩೫೦ ಮೀಟರ್ ಎತ್ತರದಲ್ಲಿದೆ. ಇದು ೧೦ ಖಾನೆಗಳನ್ನು ಹೊಂದಿದ್ದು ೨೦ ಅಡಿ ಉದ್ದ ೩೦ ಅಡಿ ಅಗಲವಾಗಿದೆ ಈ ಜಲಾಶಯದಿಂದ ೭೫೦೦ ಎಕರೆ ಜಮೀನಿಗೆ ನೀರಾವರಿಯ ಸೌಲಭ್ಯವಿದ್ದು ಇದರ ಬಲದಂಡೆ ಕಾಲುವೆ ೧೬.೫ ಕಿಲೋಮೀಟರ್ ಇದ್ದು ಸೊಬಟಿ ಗ್ರಾಮದವರೆಗೆ ಹಬ್ಬಿದೆ. ಇನ್ನೊಂದು ಎಟದಂಡೆ ಕಾಲುವೆಯು ೩೨ ಕಿಲೋವೀಟರ್ ಇದ್ದು ಬಾಚಿಗೊಂಡನಹಳ್ಳಿವರೆಗೆ ಚಾಚಿದೆ. ಈ ಜಲಾಶಯದಿಂದ ಹೆಚ್ಚು ಲಾಭ ಪಡೆದ ಊರುಗಳೆಂದರೆ ಮಾಲ್ವಿ, ಹಗರಿಬೊಮ್ಮನಹಳ್ಳಿ, ಹರೆಗೊಂಡನಹಳ್ಳಿ, ಬಾಚಿಗೊಂಡನಹಳ್ಳಿ, ಕ್ಯಾದಿಗಿಹಳ್ಳಿ, ಕಡಲಬಾಳು, ಚಿತ್ರಪಳ್ಳಿ, ಬ್ಯಾಸಿಗಿದೇರಿ,

ಹಿರೇಸೂಬಟಿ ಮುಂತಾದವು ಈ ಜಲಾಶಯದಿಂದ ೧೯೭೩ ರಿಂದ ೧೯೮೫ರ ವರೆಗೆ ಎರಡು ಬೆಳೆಗಳಿಗೆ ನೀರೊದಗಿಸಲಾಗುತ್ತಿತ್ತು. ೧೯೮೬ ರಿಂದ ಇದುವರೆಗೆ ನೀರಿನ ಸೌಲಭ್ಯ ಒದಗಿಸಲಾಗುತ್ತದೆ. ನೀರಿನ ಪ್ರಮಾಣ ಕಡಿಮೆಯಾಗಲು ಚಿತ್ರದುರ್ಗ ಜಿಲ್ಲೆಯಲ್ಲಿ ಹೆಚ್ಚು ಮಳೆಯಾಗದಿರುವುದು ಹಾಗೂ ನದಿಯ ಮೇಲ್ಭಾಗದಲ್ಲಿ ಚೆಕ್ ಡ್ಯಾಂ ಹಾಗೂ ವಡ್ಡುಗಳ ಸಂಖ್ಯೆ ಹೆಚ್ಚಾಗಿರುವುದರಿಂದ. ಈ ಜಲಾಶಯಕ್ಕೆ ಹರಿದು ಬರುವ ನೀರಿನ ಪ್ರಮಾಣ ಕಡಿಮೆಯಾಗಿದೆ.[೯]

ತುಂಗಭದ್ರಾ ನದಿ ಡ್ಯಾಂನ ಹಿನ್ನಿರಿಗೆ ಹಡಗಲಿ ಮತ್ತು ಹಗರಿಬೊಮ್ಮನಹಳ್ಳಿ ತಾಲೂಕಗಳ ಕೆಲವು ಗ್ರಾಮಗಳಿಗೆ ಅಂಟಿಕೊಂಡಿರುವುದು ಒಂದು ವರದಾನ ಎನ್ನಬಹುದು. ಜಲಾಶಯವು ಬೇಸಿಗೆಯಲ್ಲಿ ಬತ್ತಿದಾಗ ಜಲಾಶಯದ ಪಾತ್ರದಲ್ಲಿ ರೈತರು ಪ್ರತಿವರ್ಷ ಮೂರು ತಿಂಗಳಿಗೆ ಫಲಿಸುವ ಬೆಳೆ ಬೆಳೆಯುತ್ತಾರೆ. ಅಷ್ಟೆ ಅಲ್ಲದೆ ಈ ಪ್ರದೇಶದಲ್ಲಿ ನೀರಾವರಿ ಸೌಲಭ್ಯಕ್ಕಾಗಿ ಜನರು ವಿವಿಧ ಮಾರ್ಗೋಪಾಯಗಳನ್ನು ಹುಡುಕಿಕೊಂಡಿದ್ದಾರೆ. ಕೆರೆ, ಬಾವಿ, ಮತ್ತು ಕೊಳವೆಬಾವಿಗಳನ್ನು ಜನರು ಬಳಸಿಕೊಳ್ಳುತ್ತಿದ್ದು, ಇವುಗಳು ಮಳೆಯಿಂದಾಗಿ ತುಂಬಿಕೊಳ್ಳುತ್ತವೆ. ಕೃಷಿ ಇಲಾಖೆಯವರ ಮಳೆ ಮಾಪನ ಕೇಂದ್ರದ ಮಾಹಿತಿಯ ಪ್ರಕಾರ ವರ್ಷದಿಂದ ವರ್ಷಕ್ಕೆ ಪರಿಸರ ನಾಶವಾಗುತ್ತಿರುವುದರಿಂದ ಮಳೆ ಪ್ರಮಾಣ ಇಲ್ಲಿ ಕಡಿಮೆಯಾಗುತ್ತಾ ಬಂದಿರುವುದನ್ನು ಕಾಣಬಹುದು.

## ಮಣ್ಣಿನ ಮಾದರಿ ಮತ್ತು ಬೆಳೆಗಳು

ನೈಸರ್ಗಿಕವಾಗಿ ಇಲ್ಲಿ ನೆಲ ಕೆಂಪು ಮತ್ತು ಮಸಾರಿ ಅಥವಾ ಬಿಳಿಕೆಂಪು ಮಿಶ್ರವಾದ ಮಣ್ಣಾಗಿದ್ದು, ಗ್ರಾನೈಟ್ ಶಿಲೆ ಪೃಥಕರಣದಿಂದ ಉಂಟಾದ ಈ ಮಣ್ಣು (ಕಪ್ಪು ಎರೆಮಣ್ಣು) ಮರಳಿನ ರೂಪದಲ್ಲಿದೆ ಮತ್ತು ಮಿಶ್ರ ಮಣ್ಣನ್ನು ಹೊಂದಿದೆ. ಈ ಮಣ್ಣಿನಲ್ಲಿ ಜೋಳ, ಸಜ್ಜೆ, ನವಣೆ, ರಾಗಿ, ಭತ್ತ, ನೆಲಗಡಲೆ, ಮಡಿಕೆಕಾಳು, ಹೆಸರು, ಹಲಸಂದಿ ಮುಂತಾದ ಆಹಾರದ ಬೆಳೆಗಳನ್ನು ಬೆಳೆಯಲಾಗುತ್ತದೆ.[೧೦]

ಕಪ್ಪು ಮಣ್ಣಿನಲ್ಲಿ ಬಸಾಲ್ಟ್ ಶಿಲೆಯ ಶಿಥಲೀಕರಣದಿಂದಾಗಿ ಇದರಲ್ಲಿ ಹೆಚ್ಚು ಮೆಗ್ನೆಶಿಯಂ, ಅಲ್ಯೂಮಿನಿಯಂ, ಮತ್ತು ಕಬ್ಬಿಣದ ಆಕ್ಸೈಡ್‌ಗಳಾಗಿರುತ್ತವೆ. ಈ ಮಣ್ಣಿನಲ್ಲಿ ಹತ್ತಿ, ಸೂರ್ಯಕಾಂತಿ, ಈರುಳ್ಳಿ, ಮೆಣಸಿನಕಾಯಿ ಇನ್ನಿತರ ವಾಣಿಜ್ಯ ಬೆಳೆಗಳನ್ನಾಗಿ ಬೆಳೆಯಲಾಗುತ್ತದೆ. ಹಾಗೂ ಹೆಸರು, ತೋಗರಿ, ಈರುಳ್ಳಿ. ರೇಷ್ಮೆ ಮುಂತಾದ ದವಸ ದಾನ್ಯಗಳನ್ನು ಸಹ ಈ ಗ್ರಾಮದಲ್ಲಿ ಬೆಳೆಯಲಾಗುತ್ತದೆ.

## ೨.೨ ಸ್ಥಳನಾಮಗಳು

ಯಾವುದೇ ಪ್ರದೇಶದ ಬಗ್ಗೆ ಅಧ್ಯಯನ ಮಾಡುವಾಗ ಆ ಸ್ಥಳದ ಹೆಸರಿನ ಹಿನ್ನೆಲೆ ತಿಳಿಸುವುದು ಮುಖ್ಯವೆನಿಸುತ್ತದೆ. ಈ ನಿಟ್ಟಿನಲ್ಲಿ ಅಂಬಳಿ ಕುರಿತ ಸ್ಥಳನಾಮವನ್ನು ವಿವರಿಸುವ ಪ್ರಯತ್ನವನ್ನು ಈ ಅಧ್ಯಾಯದಲ್ಲಿ ಮಾಡಲಾಗಿದೆ. ಸ್ಥಳನಾಮವನ್ನು ಸಸ್ಯವಾಚಕ, ಜಲವಾಚಕ, ಮತ್ತು ವ್ಯಕ್ತಿವಾಚಕ ಹಿನ್ನೆಲೆಯಲ್ಲಿ ಗುರುತಿಸುವ ಪರಿಪಾಠ ಮುಂದುವರೆದುಕೊಂಡು ಬಂದಿದೆ. ಈ ಮಾದರಿಯಲ್ಲಿ ಅಂಬಳಿಯ ಸ್ಥಳನಾಮವನ್ನು ಕುರಿತಂತೆ ಐತಿಹ್ಯಗಳ ಮತ್ತು ವಿದ್ವಾಂಸರುಗಳು ತಮ್ಮದೆ ಆದ ಅಭಿಪ್ರಾಯವನ್ನು ಹೊಂದಿದ್ದಾರೆ.

ಐತಿಹ್ಯಗಳ ಪ್ರಕಾರ, ಅಂಬಳಿ ಸ್ಥಳನಾಮದ ಕುರಿತು ಬೇರೆ ಬೇರೆ ವಿಶ್ಲೇಷಣೆಗಳಿವೆ. ಊರಿನ ಹಿರಿಯರು ಹೇಳುವ ಪ್ರಕಾರ ಊರು ಸ್ಥಾಪನೆಯದುದು ಈಗಿನ ಅಂಬಳಿ ಗ್ರಾಮದ ಬಲ ಭಾಗಕ್ಕೆ ರಾಮಲಿಂಗೇಶ್ವರ ದೇವಾಲಯದ ಹಿಂದೆ ಮೊದಲು 'ಕೊಂಬಳಿ' ಎಂಬ ಊರು ಇತ್ತು. ಇಲ್ಲಿಯ ಜನರು ಪ್ಲೇಗ್ ರೋಗಕ್ಕೆ ಒಳಗಾಗಿ ಸಾಯುತ್ತಿದ್ದಾಗ ಈ ಊರು ತೊರೆದು ಉತ್ತರ ದಿಕ್ಕಿಗೆ ಹಳ್ಳದಾಟಿ ಈಗಿನ ಅಂಬಳಿಗೆ ಬಂದು ನೆಲೆಸಿದ್ದರು. ಹಾಗಾಗಿ ಕೊಂಬಳಿ, ಕಂಬಳಿ ಎಂಬ ಮಾತಿನ ದಾಟಿಯಲ್ಲಿ ಬದಲಾಗುತ್ತ, ಅಂಬಳಿ ಎಂದಾಯಿತು ಎಂದು ಹೇಳುತ್ತಾರೆ.

ಇನ್ನು ಕೆಲವರ ಪ್ರಕಾರ ಈ ಅಂಬಳಿ ಗ್ರಾಮದಲ್ಲಿ ನೆಲೆಸಿದ ಕಲ್ಲೇಶ್ವರ ದೇವರು ಅಂದು ಪ್ರಸಿದ್ಧ ದೇವಾಲಯವಾಗಿ ಭಕ್ತರು ಬೇಡಿದ್ದನ್ನು ಈಡೇರಿಸುವ ಜನರ ಅಚ್ಚು-ಮೆಚ್ಚಿನ ದೇವರಾಗಿತ್ತು. ಹಾಗಾಗಿ ಸುತ್ತ-ಮುತ್ತಲಿನ ಗ್ರಾಮದ ಜನರು ಈ ದೇವರ ದರ್ಶನಕ್ಕೆ ಬರುತ್ತಿದ್ದರು. ಬಂದ ಭಕ್ತರನ್ನು ಊರಿನ ಜನರು ಜೋಳದ ಹಿಟ್ಟು, ಗೋಧಿ ಹಿಟ್ಟು, ರಾಗಿ ಹಿಟ್ಟುಗಳ ಅನ್ನದ ಅಂಬಲಿ ಮಾಡಿ ಪ್ರಸಾದದ ರೂಪದಲ್ಲಿ ಅಂಬಲಿಯನ್ನು ಬಡಿಸುತ್ತಿದ್ದರು. ಅಂಬಲಿಯನ್ನು ನೀಡುವ ಊರೇ ಕಾಲ ಕಳೆದಂತೆ ಅಂಬಲಿಯಾಯಿತು. ನಂತರ ಮಾತಿನ ದಾಟಿಯಲ್ಲಿ ಅಂಬಲಿ ಹೋಗಿ ಅಂಬಳಿ ಎಂಬ ಹೆಸರು ಬಂದಿದೆ ಎಂದು ಹೇಳುತ್ತಾರೆ.

ಶಾಸನದಲ್ಲಿ ಉಲ್ಲೇಖವಿರುವ ಪ್ರಕಾರ, ಕ್ರಿ.ಶ. ೧೧೪೩ನೇ ಶಾಸನದಲ್ಲಿ ಚಾಲುಕ್ಯ ಇಮ್ಮಡಿ ಜಗದೇಕಮಲ್ಲನು ಕಲ್ಯಾಣದಲ್ಲಿ ಆಳ್ವಿಕೆ ಮಾಡುತ್ತಿದ್ದಾಗ. ಅವನ ಸಾಮಂತ ಜಗದೇಕಮಲ್ಲ ವೀರಪಾಂಡ್ಯದೇವನು ನೊಳಂಬವಾಡಿ-೩೨೦೦೦ ಆಳುತ್ತಿದ್ದ. ಅಗ ಕದಂಬ ವಂಶದ ಘಟ್ಟಿದೇವರಸನ ಮಗ ಚಿಬಿದೇವರಸನ್ನು ಕೊಟ್ಟೂರಿನಲ್ಲಿದ್ದು 'ಅಮ್ಮೆಳೆ'ಯಲ್ಲಿ ಜ್ಞಾನಪ್ರಕಾಶಭಟ್ಟಾರಕರು ಮಾಡಿಸಿದ ನರಸಿಂಹದೇವರಿಗೆ ಭೂದಾನ ಮಾಡಿದ ಎಂದು ಉಲ್ಲೇಖವಿದೆ.[೧೨]

ಕ್ರಿ.ಶ. ೧೧೦೬ನೆ ಶಾಸನದಲ್ಲಿ ಚಾಲುಕ್ಯ ತ್ರಿಭುವನಮಲ್ಲನ ಕಾಲದಲ್ಲಿ ನೊಳಂಬವಾಡಿ-೩೨೦೦೦ದ ಹೆರ್ಜುಂಕದ ಅಧಿಕಾರಿಯಾಗಿದ್ದ ಅಣುಕಪಲ್ಲವರಾಯನ ಅನುಮತಿಯಂತೆ ಕಾಳಿಮರಸ ಮತ್ತು ಕೇಶಿರಾಜರು 'ಅಮ್ಮೆಳೆ'ಯ ಐವತ್ತು ಮಹಾಜನರ ಕಾಲನ್ನು ತೊಳೆದು ಹಿರಿಯಕೆಣೆಯ ಜೀರ್ಣೋದ್ಧಾರಕ್ಕಾಗಿ ಎಲೆಯ ಬಳ್ಳಿಯ ಮೇಲಿನ ಸುಂಕವನ್ನು ಬಿಡುತ್ತಾರೆ ಹಾಗೂ ಭೂದಾನವನ್ನೂ ನೀಡಿತ್ತಾರೆ.[೧೩]

ಈ ಮೇಲಿನ ಶಾಸನದಲ್ಲಿರುವುದನ್ನು ಗಮನಿಸಿದರೆ 'ಅಮ್ಮೆಳೆ'ಯು ಊರಾಗಿತ್ತು. ಇದು ಬ್ರಾಹ್ಮಣರು ವಾಸಿಸಿರುವ ಗ್ರಾಮವಾಗಿದೆ. ಕಲ್ಲೇಶ್ವರ ದೇವಾಲಯದಲ್ಲಿ ದಿನ ನಿತ್ಯ ಅಂಬಲಿಯ ಪ್ರಸಾದ ನಡೆಯುವುದರಿಂದ, ಅಮ್ಮಳೆ ಎಂಬ ಪದವು ಹಳ್ಳಿಯ ಜನರ ಮಾತಿನಲ್ಲಿ ಕ್ಲಿಷ್ಟಕರ ಪದವಾಗಿದ್ದು, ಜನರು 'ಅಮ್ಮಳೆ' ಬದಲು ಆಡುಭಾಷೆಯಲ್ಲಿ ಅಂಬಲಿ, ಅಂಬಳಿ ಎಂದು ಕರೆದಿರಬಹುದು.

**ಕೊನೆಟಿಪ್ಪಣಿಗಳು**

೦೧. ವಾಸುದೇವ ಬಡಿಗೇರ, ಬಳ್ಳಾರಿ ಪರಿಸರದ ಸಾಂಸ್ಕೃತಿಕ ಪರಂಪರೆ ಭಾಗ-೦೧, ಪು, ೧-೨

೦೨. ನಾಡ ಕಛೇರಿ, ಮಾಹಿತಿ

೦೩. ಬಳ್ಳಾರಿ ಜಿಲ್ಲೆಯ ಕೈಪಿಡಿ, ೨೦೧೬-೧೭ನೇ ಸಾಲಿನ

೦೪. ನಾಡ ಕಛೇರಿ, ಮಾಹಿತಿ

೦೫. ವಾಸುದೇವ ಬಡಿಗೇರ, ಪೂರ್ವೋಕ್ತ, ಪು, ೨

೦೬. ಅದೇ, ಪು, ೩

೦೭. ಅದೇ, ಪು, ೩

೦೮. ಪರಮೇಶ್ವರಯ್ಯ ಸೊಪ್ಪಿನಮಠ, ಹಗರಿಬೊಮ್ಮನಹಳ್ಳಿ ತಾಲೂಕು ದರ್ಶನ, ಪು, ೨೭

೦೯. ಅದೇ, ಪು, ೨೭

೧೦. ಶ್ರೀನಿವಾಸ ಎಲ್. 'ಹಂಪಿ ಪರಿಸರದ ಆದಿಮಶನವನ ನೆಲೆಗಳು' ಪು, ೫೩

೧೧. ಸೋಮಶೇಖರ್ ಎಸ್.ವೈ. (ಸಂ), ಸ್ಥಳೀಯ ಚರಿತ್ರೆ ಮತ್ತು ಪುರಾತತ್ವ ಮಾಲೆ-೪ ಜಗಳೂರು, ಪು, ೧೬

೧೨. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ, ಪು, ೨೬೦

೧೩. ಅದೇ, ಪು, ೨೫೪

# ಅಧ್ಯಾಯ – ಮೂರು

## ಪ್ರಾಗಿತಿಹಾಸ ಮತ್ತು ಇತಿಹಾಸ

**ಪ್ರಾಗಿತಿಹಾಸ**

ಆದಿ ಮಾನವನ ವಿಕಾಸ ಹಾಗೂ ಆತನು ಬೆಳೆದು ಬಂದ ಹಾದಿ ಮತ್ತು ದೀರ್ಘಕಾಲದ ಆತನ ಜೀವನ ಶೈಲಿಯನ್ನು ಅಧ್ಯಯನ ದೃಷ್ಟಿಯಿಂದ ಪ್ರಾಗಿತಿಹಾಸ ಕಾಲ. ಆದಿ ಇತಿಹಾಸಕಾಲ, ಮತ್ತು ಇತಿಹಾಸ ಕಾಲ ಎಂದು ಅನುಕ್ರಮವಾಗಿ ವಿಭಾಗಿಸಿಕೊಳ್ಳಲಾಗಿದೆ. ಇದರಲ್ಲಿ ಮೊದಲನೆಯ ಹಂತವಾದ ಪ್ರಾಗ್ಯೆತಿಹಾಸಿಕ ಕಾಲವು ಮಾನವನಿಗೆ ಅಕ್ಷರ ಜ್ಞಾನವಿಲ್ಲದ ಕಾಲವಾಗಿದೆ. ಈ ಕಾಲಘಟ್ಟದಲ್ಲಿ ಮಾನವನು ಭೂಮಿಯ ಮೇಲೆ ಅನಾಗರೀಕ ಬದುಕನ್ನು ಸಾಗಿಸುತ್ತಿದ್ದ ಮತ್ತು ಯಾವುದೇ ರೀತಿಯ ಬರವಣಿಗೆಯನ್ನಾಗಲಿ, ಲಿಪಿಯನ್ನಾಗಲಿ ಕಂಡುಕೊಂಡಿರಲಿಲ್ಲ. ಆದ್ದರಿಂದ ಆದಿಮ ಸಮಾಜದ ಜೀವನ ಕ್ರಮವನ್ನು ಕುರಿತಾದ ಸಾಹಿತ್ಯ, ದಂತಕಥೆಗಳು ನಮಗೆ ಲಭ್ಯವಾಗುವುದಿಲ್ಲ. ಆದರೂ ಅವನು ಕಾಲಾನುಕ್ರಮದಲ್ಲಿ ಬಿಟ್ಟುಹೋದ ಕುರುಹುಗಳಿಂದ ಅವನ ಜೀವನ ವೃತ್ತಾಂತವನ್ನು ತಿಳಿಯುವ ಪ್ರಯತ್ನ ಇಂದಿಗೂ ನಡೆಯುತ್ತಲಿದೆ.

ಆದಿ ಮಾನವ ತನ್ನ ದಿನ ನಿತ್ಯದ ಬದುಕಿನಲ್ಲಿ ಬೇಟೆಯಾಡಲು, ಆಹಾರ ಸಂಗ್ರಹಿಸಲು ಬಳಸಿದಂತಹ ಕಲ್ಲಿನ ಆಯುಧೋಪಕರಣಗಳು, ಮಣ್ಣಿನ ಮಡಿಕೆಗಳು, ಆತನು ಪ್ರಕೃತಿಯಲ್ಲಿ ತಾನು ಕಂಡದ್ದನ್ನು, ತನಗಾದ ಅನುಭವಗಳನ್ನು, ಭಾವನೆಗಳನ್ನು ಗುಹೆಗಳಲ್ಲಿ. ಬಯಲು ಬಂಡೆಗಳ ಮೇಲೆ ಅಭಿವ್ಯಕ್ತಗೊಳಿಸಿದ ಕುಟ್ಟುಚಿತ್ರ, ಗೀರುಚಿತ್ರ ಮತ್ತು ವರ್ಣಚಿತ್ರಗಳು ಮತ್ತು ಶಿಲಾಸಮಾಧಿಗಳ ನೆರವಿನಿಂದ ಗತ ಜೀವನವನ್ನು ನಾವು ತಿಳಿಯಬಹುದಾಗಿದೆ.

ಈ ರೀತಿಯಲ್ಲಿ ಅಭಿವ್ಯಕ್ತಗೊಂಡ ವರ್ಣ ರೇಖಾ ಚಿತ್ರಗಳು ಶಿಲಾಸಮಾಧಿಗಳು ವಾಸ್ತುಶಿಲ್ಪದ ಕುರುಹುಗಳಾಗಿವೆ. ಮತ್ತು ಅವನು ಬಳಸಿ ಬಿಟ್ಟು ಹೋದ ಆಯುಧೋಪಕರಣಗಳು ಪ್ರಮುಖ ಆಕರ ಸಾಮಗ್ರಿಗಳಾಗಿವೆ. ಈ ಆಯುಧೋಪಕರಣಗಳ ಆಧಾರದ ಹಿನ್ನೆಲೆಯಲ್ಲಿ ಪ್ರಾಗಿತಿಹಾಸವನ್ನು 'ಶಿಲಾಯುಗ'ವೆಂದು ಕರೆಯಲಾಯಿತು. ಮತ್ತು ಶಿಲಾಯುಧಗಳ ಜೊತೆಗೆ ಲೋಹವನ್ನು ಬಳಸಲು ಪ್ರಾರಂಭವಾದ ಕಾಲಘಟ್ಟವನ್ನು ಲೋಹಯುಗವೆಂದು ಎರಡು ರೀತಿಯಲ್ಲಿ ಅಭ್ಯಾಸಿಸಲಾಯಿತು.

ಶಿಲಾಯುಗದಲ್ಲಿ ಮಾನವ ಒಂದೇ ರೀತಿಯಾಗಿರಲಿಲ್ಲ. ಆತನು ಭೌತಿಕವಾಗಿಯೂ, ಹಾಗೂ ಶಾರೀರಿಕವಾಗಿಯು ಬದಲಾವಣೆಯನ್ನು ಹೊಂದುವುದರ ಜೊತೆಗೆ ತನ್ನ ಸುತ್ತಲಿನ ಪರಿಸರದಲ್ಲಿಯೂ ಪರಿವರ್ತನೆಯನ್ನುಂಟು ಮಾಡುತ್ತಿದ್ದನು. ಹೀಗೆ ಶಿಲಾಯುಗದ ಮಾನವನ ಜೀವನ ಸಂಸ್ಕೃತಿಯನ್ನು ತಿಳಿಯಲು ಅನುಕ್ರಮವಾಗಿ ಹಳೇ ಶಿಲಾಯುಗ, ಮಧ್ಯ ಹಳೇ ಶಿಲಾಯುಗ, ನವಶಿಲಾಯುಗ ಮತ್ತು ಶಿಲಾ–ತಾಮ್ರಯುಗ (ಲೋಹಯುಗ) ಮತ್ತು ಬೃಹತ್ ಶಿಲಾಯುಗ ಅಥವಾ ಕಬ್ಬಿಣ ಯುಗ ಎಂದು ನಾಲ್ಕು ವಿಭಾಗಗಳಾಗಿ ವಿಂಗಡಿಸಲಾಗಿದೆ.

ಕರ್ನಾಟಕವು ಶಿಲಾಯುಗ ಸಂಸ್ಕೃತಿಯ ತವರೂರಾಗಿದ್ದು, ಪ್ರತಿಯೊಂದು ಯುಗಕ್ಕೆ ಸಂಬಂಧಿಸಿದ ಸುಮಾರು ೨೫೧೭ಕ್ಕೂ ಅಧಿಕ ನೆಲೆಗಳನ್ನು ಈಗಾಗಲೇ ಹಲವಾರು ವಿದ್ವಾಂಸರು

ಪತ್ತೆಹಚ್ಚಿದ್ದಾರೆ.[೧] ಅಲ್ಲದೆ ರಾಮನಗರದಿಂದ ತುಮಕೂರು, ಚಿತ್ರದುರ್ಗ, ಬಳ್ಳಾರಿ, ರಾಯಚೂರು ಪ್ರದೇಶಗಳವರೆಗೆ ಹಬ್ಬಿಕೊಂಡಿರುವ ಬೆಟ್ಟಸಾಲುಗಳು ಸುಮಾರು ೨೫೦ ಕೋಟಿ ವರ್ಷಗಳ ಹಿಂದೆ ರೂಪಗೊಂಡಿತ್ತೆಂದು ಭೂವಿಜ್ಞಾನಿಗಳು ಅಭಿಪ್ರಾಯಪಟ್ಟಿದ್ದು. ಬೆಟ್ಟಗುಡ್ಡಗಳಿಂದ ಕೂಡಿದ ಈ ಪರಿಸರ ಆದಿಮಾನವನಿಗೆ ವಸತಿ ಯೋಗ್ಯವಾದ ನೀರಿನ ಸೆರೆ, ಹಾಗೂ ಕಗ್ಗಲ್ಲು ಬೆಟ್ಟಗಳು ಸುರಕ್ಷಿತ ಪ್ರದೇಶಗಳಾಗಿ ಕಂಡುಬಂದವು. ಪ್ರಕೃತಿದತ್ತವಾದ ರಕ್ಷಣಾ ಸೌಲಭ್ಯವಲ್ಲದೆ. ಅಲ್ಲಿ ಹೇರಳವಾಗಿ ದೊರೆಯುತ್ತಿದ್ದ ಶಿಲಾರಚನೆಗಳು ಅವರ ಆಯುಧಗಳಿಗೆ ಉಪಯುಕ್ತ ವಸ್ತುವಾದವು. ಹಾಗಾಗಿ ಈ ಭೂಲಕ್ಷಣವುಳ್ಳ ಪರಿಸರದಲ್ಲಿ ಹೆಚ್ಚು ಪ್ರಾಗೈತಿಹಾಸಿಕ ನೆಲೆಗಳನ್ನು ಕಾಣಬಹುದಾಗಿದೆ.[೨] ಬಳ್ಳಾರಿ ಜಿಲ್ಲೆ ನಿಟ್ಟೂರು (ಸಿರಗುಪ್ಪ ತಾಲೂಕು) ತುಂಗಭದ್ರಾ ನದಿಪಾತ್ರದ ಒಂದು ಪ್ರಮುಖ ನೆಲೆ. ಇಲ್ಲಿ ದೊರೆತ ಶಿಲಾ ಉಪಕರಣಗಳು ನದಿ ದಂಡೆಯ ಪದರಗಳಲ್ಲಿ ದೊರೆತಿರುವುದೇ ಅಲ್ಲದೇ. ಪಶುವಿನ ಪಳೆಯುಳಿಕೆಯು ದೊರೆತಿರುವುದರಿಂದ ಶಿಲಾಯುಗದ ಸಮಯದ ಪ್ರಾಣಿವರ್ಗದ ವಿವರವನ್ನು ಪಡೆದುಕೊಳ್ಳಲು ಉಪಯುಕ್ತ ಮಾಹಿತಿ ದೊರೆತಂತಾಗಿದೆ. ಇದನ್ನು ಶೋಧಿಸಿದವರು ಜಡ್.ಡಿ. ಅನ್ಸಾರಿ (೧೯೭೦). ನೂತನ ಶಿಲಾಯುಗದ ನೆಲೆಗಳಾದ ಸಂಗನಕಲ್ಲು (ಸುಬ್ಬಾರಾವ್ ಬಿ. ೧೯೪೮) ತೆಕ್ಕಲಕೋಟೆ (ನಾಗರಾಜರಾವ್ ಎಂ.ಎಸ್., ೧೯೬೫) ಸಂಸ್ಕೃತಿಗೆ ಸೇರಿದ್ದೆಂದು ಹೇಳುವ ಬೂದಿದಿಬ್ಬ (ಆಸ್ಕ ಮೌಂಡ್) ಗಳ ಉತ್ಖನನಗಳೂ ನಡೆದಿದ್ದು, ಕೆಲವು ಉಪಯುಕ್ತ ಮಾಹಿತಿಗಳು ಲಬ್ಧವಾಗಿದೆ. ಇವುಗಳಲ್ಲಿ ಉತ್ನೂರು (ರಾಯಚೂರು ಜಿಲ್ಲೆ) ಉತ್ಖನನ (ಅಲ್ಚಿನ್.ಎಫ್.ಆರ್. ೧೯೬೧, ಕಪ್ಪಗಲ್ (ಬಳ್ಳಾರಿ ಜಿಲ್ಲೆ) ಉತ್ಖನನ (ಮಜುಂದಾರ್ ಜಿ.ಜಿ ೧೯೬೬) ಕುಡತಿನಿಯ (ಬಳ್ಳಾರಿ ತಾಲೂಕು) ನವಶಿಲಾಯುಗದ ವಸತಿ ಅವಶೇಷಗಳನ್ನು ೧೮೪೦ರ ದಶಕದಲ್ಲಿ ನ್ಯೂಬೋಲ್ಡ್ ಬೂದಿದಿಬ್ಬವನ್ನು ಸೂಕ್ಷ್ಮವಾಗಿ ಪರೀಕ್ಷಿಸಿದ.[೩] ನಂತರ ಇದೇ ಶತಮಾನದ ಕೊನೆಯ ದಶಕಗಳಲ್ಲಿ ಕೋಲ್ ಹಾಗೂ ರಾಬರ್ಟ್ ಬ್ರೂಸ್ ಫೂಟ್ ಇಲ್ಲಿ ಸರ್ವೇಕ್ಷಣೆ ನಡೆಸಿದರು. ಕಲ್ಲಿನ ಕೊಡಲಿ, ಮಣ್ಪಾತ್ರೆ, ಅರೆಯುವ ಕಲ್ಲು ಮುಂತಾದ ಅವಶೇಷಗಳನ್ನು ಇಲ್ಲಿಂದ ಸಂಗ್ರಹಿಸಿದ ರಾಬರ್ಟ್ ಬ್ರೂಸ್ ಫೂಟ್ ಜಾನುವಾರುಗಳ ಸಗಣಿಯನ್ನು ಇಲ್ಲಿ ರಾಶಿ ಹಾಕಿ ಸುಟ್ಟಿದ್ದರಿಂದ ದಿಬ್ಬ ನಿರ್ಮಾಣಗೊಂಡಿರಬೇಕೆಂದು ತರ್ಕಿಸಿದ. ಲಾಂಗ್‌ಹರ್ಸ್ಟ್ ಇಲ್ಲಿ ೧೯೧೬ರಲ್ಲಿ ಉತ್ಖನನ ಮಾಡಿದ. ೧೯೫೭ರಲ್ಲಿ ಅಲ್ಚಿನ್ ಇಲ್ಲಿ ಸಂಶೋಧನಾ ಕಾರ್ಯ ಮಾಡಿದ್ದಾನೆ. ೨೦೦೨ರಲ್ಲಿ ರವಿ ಕೋರಿಶೆಟ್ಟರ್ ಅವರ ತಂಡ ಇಲ್ಲಿ ಅಗೆದ ಪರೀಕ್ಷಾ ಗುಂಡಿಯಲ್ಲಿ ಅಪರೂಪದ ಅವಶೇಷ ಬೆಳಕಿಗೆ ಬಂದಿತು. ಒಂದರ ಮೇಲೊಂದಿಟ್ಟ ಮೂರು ಪೂರ್ಣ ಮಡಕೆಗಳ ಕೆಳಗೆ ಮಣ್ಣಿನ ಆರು ಕಾಲಿನ ಶವಪೆಟ್ಟಿಗೆ ಇಲ್ಲಿತ್ತು. ಇದರೊಳಗೆ ೬-೭ ವರ್ಷದ ಮಗುವನ್ನು ಸಮಾಧಿಗೊಳಿಸಲಾಗಿತ್ತು. ಉತ್ತರ-ದಕ್ಷಿಣಾಭಿಮುಖವಾಗಿದ್ದ ಈ ಪೆಟ್ಟಿಗೆಯ ಸುತ್ತಲಿಟ್ಟಿದ್ದ ೧೩ ಗಡಿಗೆಗಳಲ್ಲೂ ಮಗುವಿನ ಕೆಲವೊಂದು ಮೂಳೆಗಳನ್ನು ಇಡಲಾಗಿತ್ತು. ಈ ಸಮಾಧಿ ನವಶಿಲಾಯುಗದ ಅಂತಿಮ ಹಂತಕ್ಕೆ ಸೇರುತ್ತದೆ.[೪]

### ೩.೧ ಹಳೆ ಶಿಲಾಯುಗ ಸಂಸ್ಕೃತಿ (paleolithic culture)

ಹಳೆಯ ಶಿಲಾಯುಗ ಎಂಬ ಕನ್ನಡ ಪದವು ಆಂಗ್ಲಭಾಷೆಯ 'ಪ್ಯಾಲಿಯೋಲೆಥಿಕ್' ಎಂಬ ಪದದಿಂದ ಬಂದಿದೆ. ಪ್ಯಾಲಿಯೋಲಿಥಿಕ್ ಎಂಬ ಪದವು ಗ್ರೀಕ್‌ನ ಪ್ಯಾಲಿಯೋ ಮತ್ತು ಲೆಥಿಕ್ ಎಂಬ ಎರಡು ಪದಗಳಿಂದ ನಿಷ್ಪತ್ತಿ ಹೊಂದಿದೆ. ಪ್ಯಾಲಿಯೋ ಎಂದರೆ ಹಳೆಯ

ಎಂತಲೂ ಲೆಥಿಕ್ ಎಂದರೆ ಶಿಲೆ ಎಂಬ ಅರ್ಥವಿದೆ. ಒಟ್ಟಿನಲ್ಲಿ ಈ ಕಾಲದಲ್ಲಿ ಮಾನವನು ಜೀವನ ನಿರ್ವಹಣೆಗಾಗಿ ಒರಟಾದ ಶಿಲಾ ಉಪಕರಣಗಳನ್ನು ತಯಾರಿಸಿಕೊಂಡು ಬಳಕೆ ಮಾಡುತ್ತಿದ್ದ ಮತ್ತು ಅವನ ರೀತಿ-ನೀತಿಗಳು ಸಾಕಷ್ಟು ಸುಧಾರಿಸದೇ ಇನ್ನೂ ಆದಿಮ ಹಂತದಲ್ಲಿದ್ದುದರಿಂದ ಈ ಕಾಲಘಟ್ಟವನ್ನು 'ಹಳೆಯ ಶಿಲಾಯುಗ ಸಂಸ್ಕೃತಿ' ಎಂದು ಕರೆಯಲಾಗಿದೆ. ಈ ಹಳೆ ಶಿಲಾಯುಗವನ್ನು ಅಧ್ಯಯನದ ದೃಷ್ಟಿಯಿಂದ ಪುನಃ ಮೂರು ವಿಭಾಗಗಳಾಗಿ ವರ್ಗೀಕರಿಸಲಾಗಿದೆ.

೧. ಆದಿ ಹಳೆ ಶಿಲಾಯುಗ
೨. ಮಧ್ಯ ಹಳೆ ಶಿಲಾಯುಗ
೩. ಅಂತ್ಯ ಹಳೆ ಶಿಲಾಯುಗ

### ೩.೧.೧ ಆದಿ ಹಳೆಯ ಶಿಲಾಯುಗ (Lower paleolithic Age)

ಆದಿ ಹಳೆಯ ಶಿಲಾಯುಗ ಸಂಸ್ಕೃತಿಯ ನೆಲೆಗಳು ರಾಜ್ಯದಲ್ಲಿ ಅಲ್ಲಲ್ಲಿ ಕಂಡುಬಂದಿದ್ದರೂ, ಸಾಂದ್ರತೆಯ ಪ್ರಮಾಣವು ಉತ್ತರ-ದಕ್ಷಿಣವಾಗಿ ಕಂಡುಬರುತ್ತದೆ. ಈ ನಿಟ್ಟಿನಲ್ಲಿ ಉತ್ತರ ಕರ್ನಾಟಕದ ಹೆಚ್ಚಿನ ನದಿ ಪಾತ್ರಗಳಲ್ಲಿ ಅಧ್ಯಯನದ ತೀಕ್ಷ್ಣತೆಯಿಂದಾಗಿ ಹೆಚ್ಚಿನ ನೆಲೆಗಳ ಶೋಧದ ಜೊತೆಗೆ ವೈಜ್ಞಾನಿಕ ದೃಷ್ಟಿಕೋನದಲ್ಲಿ ಮಾಹಿತಿಗಳನ್ನು ಸಂಗ್ರಹಿಸಲಾಗಿದೆ. ಭೂಸ್ತರ ವಿವರಗಳೊಂದಿಗೆ ಶಿಲೋಪಕರಣಗಳು ಕಂಡುಬಂದಿರುವುದು ಉತ್ತರ ಕರ್ನಾಟಕದ ಜೀವ ನದಿಗಳ ಪಾತ್ರದಲ್ಲಿಯೇ. ಇಂತಹ ಮೊಟ್ಟಮೊದಲ ಅಧ್ಯಯನವನ್ನು ಆರ್.ವಿ. ಜೋಷಿ(೧೯೫೫) ಅವರು ಮಲಪ್ರಭಾ ನದಿ ಕೊಳ್ಳದಲ್ಲಿ ಕೈಗೊಂಡರು. ಇದೇ ದೃಷ್ಟಿಕೋನವನ್ನು ಅನುಸರಿಸಿ ಮತ್ತಷ್ಟು ಮಾಹಿತಿಯನ್ನು ಸಂಗ್ರಹಿಸಲು ಯಶಸ್ವಿಯಾದುದು ಕೃಷ್ಣಾ ಮೇಲ್ದಂಡೆ ಪ್ರದೇಶದಲ್ಲಿ ಆರ್.ಎಸ್. ಪಪ್ಪು(೧೯೭೪)ರವರ ಇತಂಹ ಪ್ರಯತ್ನ ಹಲವು ಹೊಸ ಹೊಸ ಮಾಹಿತಿಹಳನ್ನು ಒದಗಿಸಿಕೊಟ್ಟಿದೆ. ಸೋಲಾಪುರ ದೋಆಬ್ ಪ್ರದೇಶದ ಅಧ್ಯಯನವನ್ನು ಪದ್ದಯ್ಯ ಕೆ.(೧೯೬೮)ಯವರು ನಡೆಸಿರುವರು. ಈ ಪ್ರದೇಶದಲ್ಲಿಯ ಕಲಾದಗಿ ಹಾಗೂ ಅನಗವಾಡಿಗಳು ಮಹತ್ವದ ನೆಲೆಗಳಾಗಿವೆ. ಅನಗವಾಡಿಯು ವಿಶಿಷ್ಟ ನೆಲೆಯಾಗಿದ್ದು ಆದಿ, ಮಧ್ಯ ಮತ್ತು ಅಂತ್ಯ ಹಳೆಯ ಶಿಲಾಯುಗ ಉಪಕರಣಗಳು ಹೇರಳವಾಗಿ ಕಂಡುಬಂದಿವೆ. ಇಲ್ಲಿನ ಸಣ್ಣ ಪ್ರಮಾಣದ ಉತ್ಖನನದಲ್ಲಿ ಸ್ತರವಿಂಗಡನೆಯಿಂದ ಕಂಡುಬಂದಿದೆ. ಈ ಉಪಕರಣಗಳಾದ ಕೈಕೊಡಲಿ, ಮಚ್ಚುಗತ್ತಿ, ಸೀಳುಗತ್ತಿ, ಹರೆಗತ್ತಿ, ಚಕ್ರಾಕಾರದ ಉಪಕರಣಗಳಾಗಿವೆ. ಈ ಉಪಕರಣಗಳು ಫ್ರಾನ್ಸ್ ದೇಶದ ಸೆಂಟ್ ಅಶ್ಯೂಲ್ ಎಂಬಲ್ಲಿಯ ಉಪಕರಣಗಳನ್ನು ಹೋಲುತ್ತವೆ.[೬]

ಭಾರತದ ಪ್ರಾಗಿತಿಹಾಸದ ಪಿತಾಮಹ ಎಂದು ಕರೆಯಲ್ಪಟ್ಟಿರುವ ರಾಬರ್ಟ್ ಬ್ರೂಸ್‌ಫೂಟ್‌ನು ಈ ಜಿಲ್ಲೆಯ ಪ್ರಮುಖ ಪ್ರಾಗೈತಿಹಾಸಿಕ ನೆಲೆಗಳನ್ನು ಸರ್ವೇಕ್ಷಣೆ ಮಾಡಿ ಸುಮಾರು ೭೭ ನೆಲೆಗಳನ್ನು ಗುರುತಿಸಿ ಅವುಗಳಲ್ಲಿ ೩೬ ನೆಲೆಗಳು ಪ್ರಮುಖವಾಗಿವೆ ಎಂದು ತಿಳಿಸುತ್ತಾನೆ.[೭] ಬಳ್ಳಾರಿ ಜಿಲ್ಲೆಯ ಬಾದನಹಟ್ಟಿ ಬೆಟ್ಟ, ಮಲ್ಲಪುರ , ಬೆಳಗಲ್ಲು, ದರೋಜಿ, ಕಮಲಾಪುರ, ಗಾದಿಗನೂರು, ಕುರೆಕುಪ್ಪೆ, ಜೋಗ, ಕುರುವತ್ತಿ, ಜುಮ್ಮೋಬನ ಹಳ್ಳಿ ಮೊದಲಾದ

ಸ್ಥಳಗಳಲ್ಲಿ ಈ ಕಾಲಘಟ್ಟದಲ್ಲಿ ಮಾನವನು ಬಳಸಿ ಬಿಟ್ಟು ಹೋದ ಶಿಲಾ ಉಪಕರಣ ಮತ್ತು ಇತರೆ ಅವಶೇಷಗಳು ಕಂಡುಬಂದಿವೆ.

ಪ್ರಸ್ತುತ ಅಧ್ಯಯನ ಕ್ಷೇತ್ರವಾದ ಅಂಬಳಿ ಗ್ರಾಮದಲ್ಲಿ ಆದಿ ಹಳೆ ಶಿಲಾಯುಗದ ಯಾವುದೇ ಆಯುಧೋಪಕರಣಗಳು ಕಂಡುಬರುವುದಿಲ್ಲ.

### ೩.೧.೨ ಮಧ್ಯ ಹಳೆ ಶಿಲಾಯುಗ (Middle Paleolithic Age)

ಮಧ್ಯ ಹಳೆಯ ಶಿಲಾಯುಗ ಸಂಸ್ಕೃತಿಯ ವಿವಿಧ ಉಪಕರಣಗಳು ಹಾಗೂ ನಿವೇಶನಗಳು ಕರ್ನಾಟಕದ ಕೃಷ್ಣ ತುಂಗಭದ್ರಾ ನದಿಗಳ ಪ್ರದೇಶದಲ್ಲಿ ಪುರಾತತ್ವಜ್ಞರು ಗುರುತಿಸಿದ್ದಾರೆ. ಈ ನೆಲೆಗಳಲ್ಲಿ ದೊರಕಿರುವ ಕುರುಹುಗಳು ಮಧ್ಯ ಹಳೆ ಶಿಲಾಯುಗ ಸಂಸ್ಕೃತಿಯನ್ನು ಅರಿಯಲು ಸಹಕಾರಿಯಾಗಿವೆ. ಪ್ರಾಚೀನ ಸಂಪ್ರದಾಯದ ಕೈಗೊಡಲಿ, ಮಚ್ಚುಗತ್ತಿ, ಹೆರೆಗತ್ತಿ, ಕಡಿಗತ್ತಿ, ಮೊದಲಾದ ಉಪಕರಣಗಳ ಜೊತೆಗೆ ವಿಶಿಷ್ಟ ಸಂಪ್ರದಾಯದ ನೀಳಚಕ್ಕೆ ಹಾಗೂ ಮೊನೆ, ಕೊರೆಯುಳಿ ತಾಂತ್ರಿಕತೆಯ ನೈಪುಣ್ಯತೆಯಿಂದಲೂ ಸಿದ್ಧಗೊಳಿಸಿರುವುದು ಕಂಡು ಬರುತ್ತದೆ. ಬಳ್ಳಾರಿ ಜಿಲ್ಲೆಯಲ್ಲಿ ಈ ಕಾಲಘಟ್ಟಕ್ಕೆ ಸೇರಿದ ನಿವೇಶನಗಳು ಸಂಗನಕಲ್ಲು, ನಿಟ್ಟೂರು, ನೆಲೆಗಳಲ್ಲಿ ಬೆಳಕಿಗೆ ತರಲಾಗಿದೆ.[೮] ಇತರೆ ಪ್ರದೇಶದ ನೆಲೆಗಳಲ್ಲಿ ದೊರಕಿರುವ ಕುರುಹುಗಳು ಆದಿ ಹಳೆ ಶಿಲಾಯುಗಕ್ಕಿಂತಲೂ ಭಿನ್ನವಾಗಿ ಉತ್ತಮ ಜಾತಿಯ ಜಾಸ್ಪರ್,ಚರ್ಟ್ ಮೊದಲಾದ ಶಿಲೆಗಳನ್ನು ಬಳಸಿ ವಿವಿಧ ಆಯುಧೋಪಕರಣಗಳನ್ನು ತಯಾರಿಸಲಾಗಿದೆ. ಆದರೆ ಈ ಕಾಲದ ಉಪಕರಣಗಳನ್ನು ಯಾವ ರೀತಿಯಲ್ಲಿ ಉಪಯೋಗಿಸುತ್ತಾರೆ ಎಂಬುದು ಸ್ಪಷ್ಟವಾಗಿ ತಿಳಿದಿಲ್ಲ ಆದರೂ ಅನೇಕ ಬದಲಾವಣೆಗಳನ್ನು ಈ ಹಂತದಲ್ಲಿ ಆದಿಮಾನವ ಮಾಡಿಕೊಂಡಿದ್ದನ್ನು ವಿದ್ವಾಂಸರು ಗುರುತಿಸುವಲ್ಲಿ ಸಫಲರಾಗಿದ್ದಾರೆ. ಈ ಕಾಲದ ಆದಿಮಾನವ ನದಿಯ ಅಂಚಿನಲ್ಲಿ ಅಷ್ಟೇಯಲ್ಲದೇ ಬಯಲುಗಳಲ್ಲಿ ವಾಸ ಮಾಡಲು ರೂಢಿಸಿಕೊಂಡನು. ಹಾಗೂ ವೇಗವಾಗಿ ಓಡಬಲ್ಲ ಪ್ರಾಣಿಗಳನ್ನು ಬೇಟೆಯಾಡಲು ಬಿಲ್ಲು ಬಾಣಗಳ ಪ್ರಯೋಗ ಮಾಡಿದನು. ಮೈ ಮುಚ್ಚಿಕೊಳ್ಳಲು ಅಥವಾ ಮಳೆ ಗಾಳಿಗಳಿಗೆ ದೇಹ ರಕ್ಷಣೆ ಪಡೆಯಲು ಮರದ ತೊಗಟೆ ಇಲ್ಲವೆ ಪ್ರಾಣಿಗಳ ಚರ್ಮವನ್ನು ಬಳಸಿಕೊಳ್ಳವುದಕ್ಕೆ ಪ್ರಾರಂಭಿಸಿದ. ಮತ್ತು ನದಿ, ಹಳ್ಳಗಳನ್ನು ದಾಟಲು ಬುಟ್ಟಿಯಾಕಾರದ ಕಿರು ದೋಣಿಗಳನ್ನು ಈ ಕಾಲದಲ್ಲಿ ಮಾಡಿಕೊಂಡಿರಬಹುದೆಂದು ಊಹಿಸಲಾಗಿದ್ದು, ಇವೆಲ್ಲವನ್ನು ಆದಿಮಾನವನು ತನ್ನ ಜೀವನ ಕ್ರಮದಲ್ಲಿ ಮಾಡಿಕೊಂಡ ಬದಲಾವಣೆಗಳನ್ನು ಸೂಚಿಸುತ್ತದೆ.[೯] ಆದರೆ ಅಧ್ಯಯನ ಪ್ರದೇಶದಲ್ಲಿ ಇದುವರೆಗೂ ಬೆಳಕಿಗೆ ಬಂದಿಲ್ಲ.

### ೩.೧.೩ ಅಂತ್ಯ ಹಳೆ ಶಿಲಾಯುಗ (Lower Paleolethic Age)

ಹಳೆ ಶಿಲಾಗಯುಗ ಸಂಸ್ಕೃತಿಯ ಕೊನೆ ಹಂತವೇ ಅಂತ್ಯ ಹಳೆ ಶಿಲಾಯುಗವಾಗಿದೆ. ತುಲನಾತ್ಮಕ ಪರಿಶೋಧನೆಯಂತೆ ಈ ಹಂತದ ನೆಲೆಗಳು ಸಂಖ್ಯೆಯಲ್ಲಿ ಕಡಿಮೆಯಾಗಿವೆ. ರಾಜ್ಯದಲ್ಲಿ ಮೊಟ್ಟ ಮೊದಲಿಗೆ ೧೯೬೫ ರಲ್ಲಿ ಸಾಳವಾಡಗಿಯಲ್ಲಿ ಉಪಕರಣ ಉತ್ಪಾದನಾ ನೆಲೆಯನ್ನು ಸುಂದರ ಅವರು ಗುರುತಿಸಿದ್ದಾರೆ.[೧೦] ರಾಜ್ಯದ ಮಾಂಜ್ರಾ, ದ್ರೋಣ, ಕೃಷ್ಣ, ತುಂಗಾ, ಶಿಂಷಾ ಹಾಗೂ ಪೆನ್ನಾರ್ ನದಿ ಕೊಳ್ಳಗಳಲ್ಲಿ ಈ ನೆಲೆಗಳು ಹೆಚ್ಚಾಗಿ ಕಂಡುಬಂದಿವೆ.

ನೀಳ ಅಲಗುಗಳು, ಹೆರೆಯುವ ವಿವಿಧ ಮಾದರಿಗಳು ಮೊನೆ ಹೊಂದಿರುವ ಮಾದರಿಗಳು, ಚೂರಿ ತರಹದ ಚಕ್ಕೆ, ಕೊರೆಯುಳಿ, ಕೊರೆಗ, ಬಾಣದ ಮೊನೆ ಮೊದಲಾದ ಮಾದರಿಯ ಆಯುಧಗಳು ಈ ಹಂತದ ವೈಶಿಷ್ಟ ಉಪಕರಣಗಳಾಗಿವೆ. ಇವುಗಳಲ್ಲಿ ಅಲಗು, ಮೊನೆ, ಹೆರೆಯುವ ಮಾದರಿ ಉಪಕರಣಗಳು ಹೆಚ್ಚು ಪ್ರಾಮುಖ್ಯತೆಯನ್ನು ಪಡೆದುಕೊಂಡಿವೆ. ಅಲ್ಲದೆ ಎಲಬು, ದಂತ ಮತ್ತು ಜಿಂಕೆಯ ಕವಲು ಕೊಂಬು ಮೊದಲಾದವುಗಳಿಂದ ಉಪಕರಣಗಳನ್ನು ತಯಾರಿಸಿ ಬಳಸಿದ ಉದಾಹರಣೆಗಳಿವೆ. ಈ ಹಂತದಲ್ಲಿ ಆದಿಮಾನವರು ಮೂರು ರೀತಿಯ ತಂತ್ರಗಳನ್ನು ಅಳವಡಿಸಿಕೊಂಡು ಉಪಕರಣಗಳನ್ನು ತಯಾರಿಸುತ್ತಿದ್ದರು. ಅವುಗಳೆಂದರೆ.

೧. ಪರೋಕ್ಷ ಒತ್ತಡ ತಂತ್ರ
೨. ವ್ಯಕ್ಷಸ್ಥಳ ಒತ್ತಡ ತಂತ್ರ
೩. ನೇರ ಒತ್ತಡ ತಂತ್ರ

ಈ ಹಂತದ ಉಪಕರಣಗಳ ಗಾತ್ರ ಚಿಕ್ಕದಾಗಿತ್ತು. ಈ ಹಂತದಲ್ಲಿ ತಂತ್ರಜ್ಞಾನವು ಹೆಚ್ಚು ಸುಧಾರಿಸಿತು. ಈ ಕಾಲಕ್ಕೆ ಸೇರಿದ ಅವಶೇಷಗಳನ್ನು ವೈಜ್ಞಾನಿಕ ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಇಂಗಾಲ ೧೪ರ ಪರೀಕ್ಷೆಯಂತೆ ಈ ಹಂತದ ಕಾಲಮಾನವು ಇಂದಿಗೆ ಸುಮಾರು ೧೦,೦೦೦ ವರ್ಷಗಳಿಂದ ೨೫,೦೦೦ ವರ್ಷಗಳಷ್ಟು ಪೂರ್ವದಲ್ಲಿ ಇದ್ದಿತ್ತೆಂದು ತಿಳಿದುಬರುತ್ತದೆ.[೧೧] ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಇದುವರೆಗೂ ಮಧ್ಯ ಹಳೆಯ ಶಿಲಾಯುಗದ ಅವಶೇಷಗಳು ದೊರೆತಿಲ್ಲ.

**೩.೨ ಸೂಕ್ಷ್ಮ ಶಿಲಾಯುಗ ಸಂಸ್ಕೃತಿ ಅಥವಾ ಮಧ್ಯ ಶಿಲಾಯುಗ ಸಂಸ್ಕೃತಿ (Mesolethic Age)**

ಹಳೆ ಶಿಲಾಯುಗ ಮತ್ತು ನೂತನ (ನವ) ಶಿಲಾಯುಗದ ನಡುವಿನ ಕಾಲಘಟ್ಟವನ್ನು ಸೂಕ್ಷ್ಮ ಶಿಲಾಯುಗ ಅಥವಾ ಮಧ್ಯ ಶಿಲಾಯುಗ ಎಂದು ಕರೆಯುತ್ತಾರೆ.[೧೨] ಗ್ರೀಕ್ ಭಾಷೆಯಲ್ಲಿ ಮೆಸೋ ಎಂದರೆ ಸೂಕ್ಷ್ಮವೆಂತಲು, ಲೆಥಿಕ್ ಎಂದರೆ ಶಿಲೆ ಎಂಬ ಅರ್ಥಗಳಿವೆ. ಈ ಕಾಲಘಟ್ಟದಲ್ಲಿ ಬಳಸಲ್ಪಟ್ಟ ಆಯುಧಗಳು ಆಕಾರ ಮತ್ತು ಗಾತ್ರದಲ್ಲಿ ಬಹಳಷ್ಟು ಚಿಕ್ಕವಿರುವ ಕಾರಣ ಈ ಕಾಲವನ್ನು ಸೂಕ್ಷ್ಮ ಶಿಲಾಯುಗ ಸಂಸ್ಕೃತಿ ಅಥವಾ ಮಧ್ಯ ಶಿಲಾಯುಗ (Mesolethic Age) ಎಂದು ಕರೆಯಲಾಗಿದೆ. ಈ ಕಾಲದಲ್ಲಿ ಆಯುಧಗಳ ಗಾತ್ರ ಉದಾಹರಣೆಗೆ ೫.ಮಿ.ಮೀ. ವರೆಗೆ ಅಗಲವಾಗಿವೆ. ಈ ಕಾಲಘಟ್ಟದ ಮಾನವನನ್ನು 'ಹಂಟರ್ ಫಿಶರ್ ಮಾನವ' ಎಂದು ಕರೆಯಲಾಗಿದೆ. ೧೯೯೯ ರಲ್ಲಿ ಡಾ. ಹೆಚ್. ತಿಪ್ಪೇಸ್ವಾಮಿಯವರು ಸಿಡೇಗಲ್ಲು ಗ್ರಾಮದ ಹಿರೇಹಳ್ಳದ ದಂಡೆಯಲ್ಲಿ ಈ ಸಂಸ್ಕೃತಿಯ ಕೆಲವು ಸೂಕ್ಷ್ಮಶಿಲೋಪಕರಣಗಳನ್ನು ಪತ್ತೆ ಹಚ್ಚಿದ್ದು ಅವುಗಳು ಚರ್ಟ್ ಶಿಲೆಯಿಂದ ತಯಾರಿಸಲ್ಪಟ್ಟ ಬ್ಲೇಡ್, ಬರೀನ್, ಲುನೇಟ್, ರೀತಿಯ ಚಿಕ್ಕ ಚಿಕ್ಕ ಆಯುಧೋಪಕರಣಗಳಾಗಿವೆ.[೧೩] ಇವುಗಳಲ್ಲಿ ಕೆಲವು ಉಪಕರಣಗಳ ಒಂದು ಭಾಗವು ಚೂಪಾಗಿದ್ದು ಅವುಗಳ ಎರಡು ಬದಿಯಲ್ಲೂ ಹರಿತವಾಗಿವೆ. ಈ ಉಪಕರಣಗಳನ್ನು ಕೊರೆಯುವ ಇಲ್ಲವೇ ಕೊಯ್ಯಲು ಉಪಯೋಗಿಸಿರುವ ಸಾಧ್ಯತೆಯಿದೆ. ಈ ಸಂಸ್ಕೃತಿಯ ಹಂತದಲ್ಲಿ ಮಾನವನು ತನ್ನ ಅಲೆಮಾರಿ ಜೀವನ ಕೈಬಿಟ್ಟು ಒಂದೆಡೆ ನೆಲೆ ನಿಂತಿದ್ದು ಅಲ್ಲದೆ ಬೇಟೆಯಾಡುವುದು, ಮೀನುಗಾರಿಕೆ, ಆಹಾರ ಸಂಗ್ರಹಣೆಯ

ಜೊತೆಗೆ ಆಹಾರ ಬೆಳೆಗಳ ಉತ್ಪಾದನೆಯನ್ನು ಆರಂಭಿಸಿದನು. ಆದ್ದರಿಂದ ಈ ಕಾಲ ಘಟ್ಟವನ್ನು ಮಾನವನ ಸ್ಥಿತ್ಯಂತರದ ಹಂತ ಎಂದು ಗುರುತಿಸಿಕೊಳ್ಳಲಾಗಿದೆ.[೧೪]

ಈ ಹಂತದ ಶಿಲೋಪಕರಣಗಳು ಅತ್ಯಂತ ಚಿಕ್ಕವಾಗಿದ್ದು ಈ ಸಂಸ್ಕೃತಿಯ ವಿಶಿಷ್ಟ ಲಕ್ಷಣವೆಂದೆನಿಸಿದೆ. ಸೂಕ್ಷ್ಮ ಶಿಲಾಯುಧಗಳನ್ನು ಚರ್ಟ್, ಜಾಸ್ಪರ್ ಅಗೇಟ್, ಚಾಲ್ಸಿಡೋನಿ, ಕ್ರಿಸ್ಟಲ್ ಮುಂತಾದ ಅರೆ ಪ್ರಶಸ್ತ ಶಿಲೆಗಳಿಂದ ಹರಿತವಾದ ಹಲಗು ಮತ್ತು ಅರ್ಧ ಚಂದ್ರಾಕೃತಿಯ ಹೆರೆಯುವ ಹಾಗೂ ಕೊರೆಯುವ ಮೊನೆಯುಳ್ಳ ಆಯುಧಗಳನ್ನು ಗಾತ್ರದಲದಲಿ ಸೂಕ್ಷ್ಮವಾಗಿಯೂ ಮತ್ತು ಹರಿತವಾಗಿಯೂ ಮಾಡುತ್ತಿದ್ದರು ಎಂದು ತಿಳಿದುಬಂದಿದೆ. ಆಹಾರ ಸಂಗ್ರಹಣೆ ಮಾಡುವುದನ್ನು ತಿಳಿದಿದ್ದರಿಂದ ಈ ಕಾಲವನ್ನು ಸ್ಥಿತ್ಯಂತರ ಹಂತವೆಂದು ಸಹ ಕರೆಯಲಾಗಿದೆ.

ಈ ಸಂಸ್ಕೃತಿಗೆ ಸೇರಿದ ನೆಲೆಗಳು ಕರ್ನಾಟಕದಲ್ಲಿ ೧೯೩೯ರ ವೇಳೆಗೆ ಈ ಕಾಲದ ನಿವೇಶನಗಳು ಬೆಳಕಿಗೆ ಬಂದಿದ್ದರೂ ಅಲ್ಲಿ ದೊರೆತ ಉಪಕರಣಗಳ ವೈಜ್ಞಾನಿಕ ಅಧ್ಯಯನ ೧೯೫೬ರ ನಂತರ ಆರಂಭವಾಯಿತು. ಬ್ರಹ್ಮಗಿರಿ ಉತ್ಖನನದಲ್ಲಿ ಈ ಹಂತದ ಉಪಕರಣಗಳು ಗಮನಾರ್ಹ ಪ್ರಮಾಣದಲ್ಲಿ ದೊರಕಿದ್ದೂ ಅವುಗಳನ್ನು ನಿರ್ದಿಷ್ಟ ಹಾಗೂ ಪ್ರತ್ಯೇಕ ಸ್ಥಳದಲ್ಲಿದ್ದುದನ್ನು ಗುರುತಿಸದೆ ನೂತನ ಶಿಲಾಯುಗಕ್ಕೆ ಸೇರಿದವೆಂದು ಆರಂಭದಲ್ಲಿ ಭಾವಿಸಲಾಗಿತ್ತು. ಸುರಪುರ, ದೋಆಬ್, ಬೆಂಗಳೂರು ಮತ್ತು ಚಿತ್ರದುರ್ಗ ಜಿಲ್ಲೆ, ಕೃಷ್ಣ ನದಿ ಪಾತ್ರ, ದಕ್ಷಿಣ ಕನ್ನಡ ಜಿಲ್ಲೆಯ ಮಾಣಿ ಮತ್ತು ಉಪ್ಪಿನ ಅಂಗಡಿ, ಬೀದರ್ ಜಿಲ್ಲೆಯ ಮಾಂಜ್ರ, ಕಾರಂಜಾಕಣಿವೆ ಪ್ರದೇಶ, ಮಲೆನಾಡು, ಅರೆಮಲೆನಾಡು ಪ್ರದೇಶ ದಾವಣಗೆರೆ, ಶಿವಮೊಗ್ಗ, ಚಿಕ್ಕಮಗಳೂರು, ಹಾಸನ ಹಾಗೂ ತುಮಕೂರು ಜಿಲ್ಲೆಯ ಶಿಂಷಾ, ಪೆನ್ನಾರ್ ನದಿ ಪ್ರಾಂತ್ಯಗಳಲ್ಲಿ ದೊರೆತಿರುವ ಈ ಸಂಸ್ಕೃತಿಯ ವಿಸ್ತೃತ ಬೆಳವಣಿಗೆಗೆ ಹಾಗೂ ಪ್ರಸರಣದ ಬಗೆಗೆ ತಿಳಿಯಲು ಸಹಾಯಕವಾಗಿವೆ.[೧೫]

೧೯೬೫ ರಲ್ಲಿ ಪುಣೆ ಡೆಕ್ಕನ್ ಕಾಲೇಜಿನ ತಂಡದವರು ಬಳ್ಳಾರಿ ಜಿಲ್ಲೆಯ ಸಂಗನಕಲ್ಲು ಬಳಿ ಈ ಕಾಲಘಟ್ಟಕ್ಕೆ ಸಂಬಂಧಿಸಿದ ನೆಲೆಯನ್ನು ಬೆಳಕಿಗೆ ತಂದರು ಅಲ್ಲದೇ ಉಪಕರಣ ತಯಾರಿಸುತ್ತಿದ್ದ ಕೈಗಾರಿಕೆ ನೆಲೆಯನ್ನು ಪತ್ತೆಹಚ್ಚಿದರು. ನಂತರ ಇದೇ ತಂಡವು ಬಳ್ಳಾರಿ ಸಮೀಪದ ಮೋಕ ರಸ್ತೆಯಲ್ಲಿರುವ ಬಂಗಲೆ ತೋಟದ ಹತ್ತಿರ ನಡೆಸಿದ ಉತ್ಖನನದಲ್ಲಿ ಚರ್ಟ್, ಕ್ವಾರ್ಜ್, ವೈಟ್‌ಕ್ವಾರ್ಜ್, ಶಿಲೆಯಲ್ಲಿ ತಯಾರಿಸಿದ ಉಪಕರಣಗಳು ಮತ್ತು ಇವುಗಳ ತಯಾರಿಕೆಗಾಗಿ ಬಳಸಿದ ಶಿಲಾಗಟ್ಟಿಗಳು ಕಂಡುಬಂದವು.[೧೬] ಹಂಪಿ ಪರಿಸರದ ಕುಡುತಿನಿ, ಸಂಗನಕಲ್ಲು, ಕಾರಿಗನೂರು, ಗಾದಿಗನೂರು, ತಿಮ್ಮಲಾಪುರ, ಡಣಾಪುರ, ಭುವನಹಳ್ಳಿ, ಹಂಪಿ, ಅಪ್ಪಲಾಪುರ, ಅಯ್ಯನಹಳ್ಳಿ, ಕುರೆಕುಪ್ಪ, ಕೋದಾಳು, ತೋರಣಗಲ್ಲು, ಮಲ್ಲಾಪುರ, ರಾಂಪುರ, ಮಾಡಲಗೆರೆ ಮುಂತಾದ ಸ್ಥಳಗಳಲ್ಲಿ ಈ ಹಂತದ ನೆಲೆಗಳನ್ನು ಸಂಶೋಧಕರು ಗುರುತಿಸಿದ್ದಾರೆ.

**೩.೩ ನವಶಿಲಾಯುಗ ಸಂಸ್ಕೃತಿ (Neolethic Culture)**

ಮಾನವನು ತನ್ನ ಅಗತ್ಯಕ್ಕೆ ಅನುಸಾರವಾಗಿ ಆಯುಧೋಪಕರಣಗಳನ್ನು ಉಜ್ಜಿ ನಯಗೊಳಿಸಿ ಅದರ ಸೌಂದರ್ಯವನ್ನು ವೃದ್ಧಿಸಿದ್ದರಿಂದ ಈ ಯುಗವನ್ನು ನವಶಿಲಾಯುಗ ಎಂದು ಕರೆಯಲಾಗಿದೆ.

ಗ್ರೀಕ್ ಭಾಷೆಯಲ್ಲಿ 'ನಿಯೋ' ಎಂದರೆ; ನವೀನ/ಹೊಸದು ಎಂತಲು 'ಲಿಥಿಕ್' ಎಂದರೆ, ಶಿಲೆ ಎಂಬ ಅರ್ಥವಿದೆ. ಈ ಹಂತದಲ್ಲಿ ಆದಿಮ ಜನರ ರೀತಿನೀತಿಗಳು ಸಾಕಷ್ಟು

ಸುಧಾರಿಸಿದ್ದರಿಂದ ಮತ್ತು ಆಯುಧಗಳನ್ನು ಉಜ್ಜಿನಯಗೊಳಿಸಿ ಬಳಸುತ್ತಿದ್ದರಿಂದ ಈ ಸಂಸ್ಕೃತಿಯನ್ನು ನೂತನ ಶಿಲಾಯುಗ ಅಥವಾ ನವಶಿಲಾಯುಗ (ನಿಯೋಲಿಥಿಕ್ ಕಲ್ಚರ್) ಎಂದು ಕರೆಯಲಾಗಿದೆ. ಈ ಕಾಲಮಾನವನ್ನು ಕುರಿತಂತೆ ಗೋಲ್ಡನ್ ಚೈಲ್ಡರವರು ಕ್ರಾಂತಿಕಾರಕ ಕಾಲಘಟ್ಟ ಎಂದು ಕರೆದಿದ್ದಾರೆ.[೧೭] ಮಾನವನು ಅಲೆಮಾರಿ ಜೀವನದಿಂದ ಮುಕ್ತನಾಗಿ ಒಂದೆಡೆ ನೆಲೆಸಿ ಬೇಸಾಯ ಹಾಗೂ ಪಶುಪಾಲನೆಯನ್ನು ಆರಂಭಿಸಿ ಆಹಾರ ಉತ್ಪಾದನೆಯಲ್ಲಿ ತೊಡಗಿ ನಿಸರ್ಗವನ್ನು ತನ್ನ ಅನುಕೂಲಕ್ಕೆ ತಕ್ಕಂತೆ ಉಪಯೋಗಿಸಿಕೊಳ್ಳಲು ಪ್ರಯತ್ನಿಸಿದ್ದನ್ನು ಕಾಣುತ್ತೇವೆ.

ಕರ್ನಾಟಕದಲ್ಲಿ ನೂತನ ಶಿಲಾಯುಗ ಸಂಸ್ಕೃತಿಗೆ ಸಂಬಂಧಸಿದ್ದಂತೆ ಸಂಶೋಧನೆಗಳು ಮೊಟ್ಟ ಮೊದಲಿಗೆ ೧೮೭೨ ರಲ್ಲಿ ಶೋಧಿತವಾದವು. ಬಳ್ಳಾರಿ ಜಿಲ್ಲೆಯ ಕಪ್ಪಗಲ್ಲು ಬೆಟ್ಟದಲ್ಲಿ ವಿದ್ವಾಂಸರಾದ ವಿಲಿಯಂ ಪ್ರೇಸರ್‌ವರು ಈ ನೆಲೆಯನ್ನು ಶೋಧಿಸಿದರು. ಈ ಜಿಲ್ಲೆಯಲ್ಲಿ ೬೦ ನೆಲೆಗಳನ್ನು ಇದುವರೆಗೂ ಗುರುತಿಸಿದ್ದಾರೆ. ಅದರಲ್ಲಿ ಪ್ರಮುಖವಾದ ನೆಲೆ 'ಸಂಗನಕಲ್ಲು' ಆಗಿದೆ.[೧೮] ಮತ್ತು ಪ್ರಸ್ತುತ 'ಅಂಬಳಿ' ಗ್ರಾಮ ಅಧ್ಯಯನ ಕ್ಷೇತ್ರದಲ್ಲಿ ಕ್ಷೇತ್ರಕಾರ್ಯದ ಸಮಯದಲ್ಲಿ ಕೈಗೊಡಲಿಯನ್ನು ಗುರುತಿಸಲಾಗಿದೆ. ಇದನ್ನು ಉಜ್ಜಿನಯಗೊಳಿಸಲಾಗಿದೆ. ಕಪ್ಪು ಶಿಲೆಯಲ್ಲಿ ತಯಾರಿಸಲಾಗಿದ್ದು ಬಾಯಿಯ ಭಾಗವನ್ನು ಹರಿತಗೊಳಿಸಿರುವುದಿಲ್ಲ.

ನೂತನ ಶಿಲಾಯುಗ ಸಂಸ್ಕೃತಿಯ ಶಿಲೋಪಕರಣಗಳಲ್ಲಿ ವೈವಿಧ್ಯತೆಯಿದ್ದು. ಕೊಡಲಿ, ಬಾಚಿ, ಉಳಿ, ಸುತ್ತಿಗೆ, ಕೊಡಲಿ-ಸುತ್ತಿಗೆ, ಕೆತ್ತುಳಿ ಉಜ್ಜುಗ ಅಥವಾ ಅರೆಯುವ ಕಲ್ಲು, ಕವಣೆಕಲ್ಲು ಮತ್ತು ಉಂಗುರ ಕಲ್ಲು ಮೊದಲಾದವು ಪ್ರಮುಖವಾದವುಗಳಾಗಿವೆ. ಡೈಕ್, ಡಾಲರೈಟ್, ಕಣಶಿಲೆ ಮತ್ತು ಬಳಪದ ಕಲ್ಲುಗಳನ್ನು ಬಳಸಿ ಉಪಕರಣಗಳನ್ನು ರೂಪಿಸುವುದು ಕಂಡುಬಂದಿದೆ.[೧೯]

ಒಟ್ಟಿನಲ್ಲಿ ಈ ಸಂಸ್ಕೃತಿಯ ಕಾಲಮಾನವನ್ನು ವಿವಿಧ ಅಂತರ್ ವೈಜ್ಞಾನಿಕ ಸಂಶೋಧನೆಯ ಮೂಲಕ ನಿರ್ಧರಿಸಲಾಗಿದ್ದು. ಕ್ರಿ.ಪೂ. ೩೦೦೦ದಿಂದ ೧,೦೦೦ ದ ವರೆಗೆ ಅಸ್ತಿತ್ವದಲ್ಲಿತ್ತು ಎಂದು ತಿಳಿಯಲಾಗಿದೆ.

### ೩.೪ ಶಿಲಾ-ತಾಮ್ರಯುಗ ಸಂಸ್ಕೃತಿ (Chalcolethic culture)

ನೂತನ ಶಿಲಾಯುಗ ಸಂಸ್ಕೃತಿಯ ನಂತರ ವಿಕಾಸಗೊಂಡ ಹಂತ ಶಿಲಾ ತಾಮ್ರಯುಗ ಸಂಸ್ಕೃತಿಯಾಗಿದೆ. ಮಾನವನು ಕಲ್ಲನ್ನು ಹೊರತುಪಡಿಸಿ ಮೊಟ್ಟ ಮೊದಲ ಬಾರಿಗೆ ಬಳಸಿದ ಲೋಹ ತಾಮ್ರವಾದ್ದರಿಂದ ಈ ಕಾಲಘಟ್ಟವನ್ನು "ಶಿಲಾ ತಾಮ್ರಯುಗ ಸಂಸ್ಕೃತಿ" ಎಂದು ಕರಯಲಾಗುತ್ತದೆ.[೨೦] ಈ ಕಾಲಾವಧಿಯಲ್ಲಿ ಮಾನವ ತಾಮ್ರದ ಅದಿರಿನಿಂದ ಲೋಹವನ್ನು ತಯಾರಿಸಿ ಅದರಿಂದ ಆಭರಣ, ಗೊಂಬೆ, ಆಯುಧ ಉಪಕರಣ ಮೊದಲಾದ ವಸ್ತುಗಳನ್ನು ತಯಾರು ಮಾಡಲಾಗುತ್ತಿತ್ತು. ಈ ಹಂತದ ಜನ ಜೀವನದಲ್ಲಿ ಕಾಣುವ ಖಚಿತ ಬೆಳವಣಿಗೆ ಎಂದರೆ, ಶಿಲಾಯುಧಗಳ ಜೊತೆಗೆ ತಾಮ್ರ ಅಥವಾ ಕಂಚಿನ ಉಪಕರಣಗಳ ತಯಾರಿಸುವ ತಂತ್ರಗಾರಿಕೆ ಬೆಳಕಿಗೆ ಬಂದಿದ್ದಾಗಿದೆ.

ಬಳ್ಳಾರಿ ಜಿಲ್ಲೆಯಲ್ಲಿ ಕುಡುತಿನಿ, ಗಂಡಿ ಓಬಳಾಪುರ, ಸಂಗನಕಲ್ಲು, ಕುರುಗೋಡು, ಕಪ್ಪಗಲ್ಲು, ಬಳ್ಳಾರಿ, ಗಾದಿಗನೂರು, ವೆಂಕಟಾಪುರ, ಹಂಪಿ, ನಿಂಬಾಪುರ, ಬೆಳಗಲ್ಲು, ಬೆಳಗೋಡು, ಹಲಕುಂದಿ, ತೆಕ್ಕಲಕೋಟೆ, ದರೋಜಿ, ಭೈರ ನಾಯಕನಹಳ್ಳಿ, ರಾಜಾಪುರದಲ್ಲಿ ಈ

ಸಂಸ್ಕೃತಿಯ ಅವಶೇಷಗಳು ದೊರೆತಿವೆ. ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಯಾವುದೇ ಶಿಲಾಯುಧಗಳು ಕಂಡುಬರುವುದಿಲ್ಲ.

ಹೀಗೆ ಅಧ್ಯಯನ ಪ್ರದೇಶದಲ್ಲಿ ಪ್ರಾಗೈತಿಹಾಸಿಕ ಕುರುಹುಗಳು ಕಂಡುಬರುವುದಿಲ್ಲ. ೨೦-೩೦ ಕಿ.ಮೀ. ದೂರದಲ್ಲಿ ಮಾನವ ಹಳೆಶಿಲಾಯುಗದ ನೆಲೆಗಳುಳ್ಳ ಸ್ಥಳಗಳು ಕಂಡುಬರುತ್ತವೆ. ಹಾಗಾಗಿ ಈ ಪ್ರದೇಶದಲ್ಲಿ ಇನ್ನು ಹೆಚ್ಚಿನ ಸಂಶೋಧನೆ ಕೈಗೊಳ್ಳಬೇಕಾದ ಅಗತ್ಯವಿದೆ.

### ಇತಿಹಾಸ ಕಾಲ

ಬಳ್ಳಾರಿ ಜಿಲ್ಲೆಯ ಪ್ರದೇಶವು ಕನ್ನಡ ನಾಡಿನಲ್ಲಿ ಆಳಿದ ವಿವಿಧ ಅರಸುಮನೆತನಗಳ ಆಳ್ವಿಕೆಗೆ ಒಳಪಟ್ಟಿರುವುದು ಶಾಸನ, ನಾಣ್ಯ, ಸ್ಮಾರಕಗಳು ಮತ್ತು ಸಾಹಿತ್ಯಿಕ ಕುರುಹುಗಳಿಂದ ತಿಳಿಯುತ್ತದೆ. ಈ ಪ್ರದೇಶದ ಆಳರಸರಲ್ಲಿ ಮೌರ್ಯರು, ಶಾತವಾಹನರು, ಪಲ್ಲವರು. ಗಂಗರು, ಕದಂಬರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ಕಲಚೂರಿಗಳು, ಯಾದವರು, ಹೊಯ್ಸಳರು, ವಿಜಯನಗರ ಅರಸರು ಸೇರಿದ್ದಾರೆ. ಅವರಿಗೆ ಬೆಂಬಲವಾಗಿ ಮಹಾಸಾಮಂತ ಅಥವಾ ಮಹಾಮಂಡಳೇಶ್ವರರಾದ ನೊಳಂಬರು(ಪಲ್ಲವರು), ಕದಂಬರು, ಪಾಂಡ್ಯರು, ಸಿಂಧರು ಪ್ರಮುಖರಾಗಿದ್ದಾರೆ. ಇವರು ನೊಳಂಬವಾಡಿ-೩೨೦೦೦ದಲ್ಲಿ ಸಿಂಧವಾಡಿ-೧೦೦೦, ಕದಂಬಳಿಗೆ-೧೦೦೦, ಆದವಾನಿ-೫೦೦, ಕೋಗಳಿ-೫೦೦, ಕೊಟ್ಟೂರು-೧೨, ಬೆಣ್ಣೆಕಲ್ಲು-೧೨, ಉಚ್ಚಂಗಿ-೩೦ ಹೀಗೆ ಪ್ರದೇಶಗಳನ್ನು ನೋಡಿಕೊಳ್ಳುತ್ತಿದ್ದರು.[೨೧] ಇವರೊಂದಿಗೆ ಇನ್ನು ಅನೇಕ ಅರಸು ಮನೆತನಗಳು ಮಾಡಿದ ಆಳ್ವಿಕೆಯನ್ನು ಇವರ ಕಾಲದ ಶಾಸನಗಳು, ದೇವಾಲಯಗಳ ನಿರ್ಮಾಣಕ್ಕೆ ಉದಾರವಾಗಿ ದಾನದತ್ತಿಗಳನ್ನು ನೀಡಿ ಪ್ರೋತ್ಸಾಹಿಸಿರುವುದನ್ನು ಕಾಣಬಹುದು.

### ಮೌರ್ಯರು

ಪ್ರಾಚೀನ ಭಾರತದ ಪ್ರಮುಖ ಅರಸುಮನೆತನವಾದ ಮೌರ್ಯರು ಭಾರತದ ಬಹುಭಾಗವನ್ನು ಆಳಿದರು. ಭಾರತದಲ್ಲಿ ಅರಸು ಮನೆತಸದ ಅಡಿಪಾಯ ಮತ್ತು ವ್ಯವಸ್ಥಿತ ಆಡಳಿತ ಪದ್ಧತಿ ಇವರಿಂದಲೇ ಪ್ರಾರಂಭವಾಯಿತೆಂದು ಹೇಳಿದರೆ ತಪ್ಪಗಲಾರದು. ಇವರು ಉತ್ತರ ಭಾರತದ ಪಾಟಲೀಪುತ್ರವನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡು ಕ್ರಿ.ಪೂ. ೩೨೫ ರಿಂದ ಕ್ರಿ.ಪೂ. ೧೮೮ರವರೆಗೆ ಆಳ್ವಿಕೆಯನ್ನು ಮಾಡಿದರು. ಈ ಮನೆತನದ ಪ್ರಮುಖ ಅರಸರಲ್ಲೊಬ್ಬನಾದ ಅಶೋಕನ ಕಾಲಕ್ಕೆ ದಕ್ಷಿಣ ಭಾರತವು ಇವರ ಸಾಮ್ರಾಜ್ಯದೊಳಗಿದ್ದ ಬಗ್ಗೆ ಅನೇಕ ಕುರುಹುಗಳು ದೊರೆಯುತ್ತದೆ. ಚಂದ್ರಗುಪ್ತನು ಸಾಮ್ರಾಜ್ಯವನ್ನು ಮಗನಿಗೆ ನೀಡಿ ತನ್ನ ಗುರು ಭದ್ರಬಾಹುವಿನೊಂದಿಗೆ ದಕ್ಷಿಣದ ಶ್ರವಣಬೆಳಗೊಳಕ್ಕೆ ಬಂದು ಕಟವಪುರ ಅಥವಾ ಕಳ್ವಪುರ ಬೆಟ್ಟದಲ್ಲಿ ನೆಲೆಯಾಗಿ ನಿಂತನೆಂಬ ಐತಿಹ್ಯವಿದೆ.[೨೨] ಕ್ರಿಪೂ ೨೬೯ರಲ್ಲಿ ಅಧಿಕಾರಕ್ಕೆ ಬಂದ ಅಶೋಕನ ಶಾಸನಗಳು ಪ್ರದೇಶವನ್ನೊಳಗೊಂಡಂತೆ ಸುತ್ತಮುತ್ತಲಿನ ಸ್ಥಳಗಳಾದ ಬಳ್ಳಾರಿ ಜಿಲ್ಲೆಯ ಸಿರಗುಪ್ಪ ತಾಲೂಕಿನ ಉದಯಗೊಳಂ ಮತ್ತು ನಿಟ್ಟೂರು, ಕೊಪ್ಪಳ ಜಿಲ್ಲೆಯ ಕೊಪ್ಪಳದ ಗವಿಮಠ ಮತ್ತು ಪಾಲ್ಕಿಗುಂಡು, ರಾಯಚೂರು ಜಿಲ್ಲೆಯ ಮಸ್ಕಿ, ಕಲಬುರಗಿ ಜಿಲ್ಲೆಯ ಸನ್ನತಿ, ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ತಾಲೂಕಿನ ಬ್ರಹ್ಮಗಿರಿ, ಸಿದ್ಧಾಪುರ, ಜಟಂಗಿರಾಮೇಶ್ವರ

ಹಾಗೂ ಆಂಧ್ರಪ್ರದೇಶದ ಕರ್ನೂಲು ಜಿಲ್ಲೆಯ ಎರ್ರಗುಡಿ ಮತ್ತು ರಾಜುಲಮಂಡಗಿರಿಯಲ್ಲಿ ದೊರೆತಿವೆ.

ನಿಟ್ಟೂರು ಮತ್ತು ಉದಯಗೊಳಂಗಳಲ್ಲಿನ ಅಶೋಕನ ಶಾಸನಗಳ ಕಾಲ ಕ್ರಿ.ಪೂ. ೨೫೯-೨೫೮ ಎಂದು ನಿರ್ಧರಿಸಲಾಗಿದೆ. ಇವು ಬ್ರಾಹ್ಮಿಲಿಪಿಯಲ್ಲಿದ್ದು, ಪ್ರಾಕೃತ ಭಾಷೆಯಲ್ಲಿವೆ. ಈ ಶಾಸನಗಳನ್ನು ಡಾ. ಎಸ್.ಶೆಟ್ಟರ್, ಡಾ. ಎಸ್. ರಾಜಶೇಖರ ಅವರು ಶೋಧಿಸಿದ್ದು, ಕರ್ನಾಟಕ ವಿಶ್ವವಿದ್ಯಾಲಯದ 'ಕರ್ನಾಟಕ ಭಾರತಿ' ನಿಯತಕಾಲಿಕೆಯಲ್ಲಿ ಪ್ರಕಟವಾಗಿದೆ. ಈ ಎರಡು ಶಾಸನಗಳು ಧರ್ಮಸಂದೇಶ ಸಾರುತ್ತಾ ಉಪದೇಶ ನೀಡುತ್ತವೆ. ನಿಟ್ಟೂರಿನ ಶಾಸನ ಅಶೋಕ ಧರ್ಮಪ್ರಚಾರ ಮಾಡುತ್ತ ೨೫೬ ದಿನ ಕಳೆದನೆಂದು ತನ್ನ ಗಡಿನಾಡಿನ ಉಚ್ಛ ಹಾಗೂ ಕೆಳವರ್ಗ್ದ ಜನರೆಲ್ಲರೂ ಧರ್ಮಾಸಕ್ತರಾಗಬೇಕೆಂದು ಹೇಳಿದುದನ್ನು ನಿರೂಪಿಸುತ್ತದೆ. ಅದೇ ನಿಟ್ಟೂರಿನ ಇನ್ನೊಂದು ಶಾಸನ 'ರಾಜಾ ಅಸೋಕೋ ದೇವಂ' ಎಂದು ಪ್ರಾರಂಭವಾಗುತ್ತಿದ್ದು ಮಾತಾ, ಪಿತ, ಗುರುಗಳಿಗೆ ಬ್ರಾಹ್ಮಣರಿಗೆ ಶುಶ್ರೂಷೆ ಒದಗಿಸಿದುದನ್ನು ತಿಳಿಸುತ್ತದೆ. ಹೀಗೆ ಮೌರ್ಯರ ಆಡಳಿತ ಕಾಲದಲ್ಲಿ ಬಳ್ಳಾರಿ ಪ್ರದೇಶವೂ ಅವರಿಗೆ ಒಳಪಟ್ಟಿತ್ತು.[೨೩]

ಬ್ರಹ್ಮಗಿರಿ ಮತ್ತು ಚಂದ್ರವಳ್ಳಿಯಲ್ಲಿ ನಡೆಸಿದ ಪುರಾತತ್ವ ಉತ್ಖನನಗಳು ಮೌರ್ಯರ ಕಾಲದ ಮೇಲೆ ಬೆಳಕು ಚೆಲ್ಲುತ್ತವೆ. ಮೌರ್ಯರ ಕಾಲಕ್ಕೆ ಸೇರಿರಬಹುದಾದ ಔತ್ತರೇಯ ಕಪ್ಪು ಮಣ್ಣಿನ ಹೊಳಪಿನ ಪಾತ್ರೆಗಳು, ಮುದ್ರಾಂಕಿತ ನಾಣ್ಯಗಳು ಇಲ್ಲಿ ದೊರೆಕಿವೆ. ಕಪ್ಪು ಮಣ್ಣಿನ ಹೊಳಪಿನ ಪಾತ್ರೆಗಳು ಮೌರ್ಯರ ಕಾಲದ ಸಂಸ್ಕೃತಿಯ ಕುರುಹಿಗಳಾಗಿವೆ. ಅಲ್ಲದೆ ಮುದ್ರಾಂಕಿತ ನಾಣ್ಯಗಳೂ ಆ ಕಾಲಕ್ಕೆ ಸೇರಿಸಲ್ಪಡುತ್ತವೆ. ಇವುಗಳ ಸಹಾಯದಿಂದ ಈ ಪ್ರದೇಶದಲ್ಲಿ ಮೌರ್ಯರ ಸಂಸ್ಕೃತಿ ಗಾಢವಾಗಿ ಬೇರೂರಿತ್ತು ಎಂದು ಹೇಳಬಹುದು. ಬ್ರಹ್ಮಗಿರಿಯಲ್ಲಿ ದೊರೆತಿರುವ ಇಟ್ಟಿಗೆಯ ಗಜಪೃಷ್ಠಾಕೃತಿಯ ಕಟ್ಟಡವು ಬಹುಶಃ ಬೌದ್ಧ ಚೈತ್ಯಾಲಯ ಇದ್ದಿರಬಹುದೆಂದು ತೋರುತ್ತದೆ.[೨೪] ಇವುಗಳ ಆಧಾರದಿಂದ ಧಾರ್ಮಿಕವಾಗಿ ಈ ಪ್ರದೇಶದ ಮಹತ್ವವನ್ನು ಹೊಂದಿತ್ತೆಂದು ತಿಳಿಯಬಹುದಾಗಿದೆ.

ಮೌರ್ಯರು ಕರ್ನಾಟಕಕ್ಕೆ ಆಗಮಿಸಿದ್ದಾಗಿನಿಂದಲೂ ಈ ಪ್ರದೇಶವು ಉತ್ತರದ ನೇರ ಸಂಪರ್ಕವನ್ನು ಹೊಂದಿ ವ್ಯಾಪಾರ ವಹಿವಾಟುಗಳಿಗೆ ಎಡೆಮಾಡಿಕೊಟ್ಟಿತ್ತು. ಇದರಿಂದ ಈ ಪ್ರದೇಶದ ಸಾಮಾಜಿಕ, ಆರ್ಥಿಕ ಗುಣಮಟ್ಟವೂ ಉತ್ತಮ ಹಂತವನ್ನು ತಲುಪಿತ್ತು ಎಂದು ಹೇಳಬಹುದು. ಈ ಪ್ರದೇಶದಿಂದ ಮೌರ್ಯರು ಕಣ್ಮರೆಯಾಗುತ್ತಿದ್ದಂತೆ ಶಾತವಾಹನ ಸಂಸ್ಕೃತಿಯು ಪ್ರಬಲವಾಗಿ ಬೆಳೆಯತೊಡಗಿತು.

**ಶಾತವಾಹನರು**

ಮೌರ್ಯರ ಸಾಮಂತರಾಗಿ ಆಡಳಿತ ನಿರ್ವಹಿಸುತ್ತಿದ್ದ ಶಾತವಾಹನರು ಕ್ರಿ.ಪೂ. ೨೩೫ ರಿಂದ ಸ್ವತಂತ್ರವಾಗಿ ಆಳ್ವಿಕೆ ಆರಂಭಿಸಿ ಕ್ರಿ.ಶ ೨೨೦ ರವರೆಗೆ ರಾಜ್ಯಭಾರ ಮಾಡಿದರು. ಇವರ ರಾಜಧಾನಿ ಪ್ರೈಠಾಣ. ಸಿಮುಖನು ಶಾತವಾಹನ ಸಾಮ್ರಾಜ್ಯ ಸ್ಥಾಪಕ, ಎರಡನೆಯ ಶಾತಕರ್ಣಿ, ಗೌತಮಿಪುತ್ರ ಶಾತಕರ್ಣಿ, ವಶಿಷ್ಠಪುತ್ರ ಪುಳಮಾಯಿ, ಯಜ್ಞಶ್ರೀಶಾತಕರ್ಣಿ, ರಾಜ ಪ್ರಮುಖರು. ಮಹಾರಾಷ್ಟ್ರ, ಆಂಧ್ರಪ್ರದೇಶ, ಮಧ್ಯಪ್ರದೇಶ, ಕರ್ನಾಟಕ ಆಡಳಿತದ ವ್ಯಾಪ್ತಿಗೆ ಒಳಪಟ್ಟಿದ್ದವು.

ಚೈತ್ಯಾಲಯಗಳ, ಸ್ತೂಪಗಳ ನಿರ್ಮಾಣದಲ್ಲಿ ಪ್ರಮುಖ ಪಾತ್ರವಹಿಸಿದ್ದಾರೆ. ನಾಣ್ಯಗಳ ಮುದ್ರಾ, ಮಡಕೆಗಳ ಉಪಯೋಗ ಆರ್ಥಿಕ-ಸಾಮಾಜಿಕತೆಗೆ ಹಿಡಿದ ಕನ್ನಡಿ.

ಶಾತವಾಹನರ ಮೂಲನೆಲೆ ಬಳ್ಳಾರಿ ಜಿಲ್ಲೆಯೆಂದು ಕೆಲವು ವಿದ್ವಾಂಸರ ಹೇಳಿಕೆ ಅಲ್ಲದೆ ಶಾತವಾಹನರು ಕರ್ನಾಟಕದವರೋ ಆಂಧ್ರದವರೋ ಎಂಬುದಕ್ಕೆ ವಿದ್ವಾಂಸರಲ್ಲಿ ವಾದ ವಿವಾದಗಳಿವೆ. ಪುರಾಣಗಳಲ್ಲಿ ಇವರನ್ನು 'ಆಂಧ್ರ ಭೃತ್ಯರು' ಎಂದು ಕರೆದಿರುವುದು ಈ ವಾದಗಳಿಗೆ ಕಾರಣವಾಗಿದೆ. ಈ ವಂಶದ ಅರಸರು ವೈಜಯಂತಿ (ಬನವಾಸಿ) ಮತ್ತು ಪ್ರತಿಷ್ಠಾನ (ಪೈಠಾಣ) ನಗರಗಳಿಂದ ಆಳುತ್ತಿದ್ದುದು ತಿಳಿದುಬರುತ್ತದೆ. ಕನ್ನಡದ ಪ್ರದೇಶವನ್ನು ಆಳಿದ ಇವರು ಕೆಲವರು ಆಳಿದ್ದುದು ತಿಳಿದುಬರುವುದರಿಂದ ಹಾಗೂ ಕೊಂಡಾಪುರದಲ್ಲಿ ಶಾತವಾಹನರ ನಾಣ್ಯಗಳು ಇತರ ಕುರುಹುಗಳು ದೊರೆತಿರುವುದರಿಂದ ಇವರು ಆಂಧ್ರದವರೆಂಬ ಇನ್ನೊಂದು ವಾದವಿದೆ.[೨೫] ವಾದಗಳೇನೇ ಇರಲಿ, ಬಳ್ಳಾರಿ ಜಿಲ್ಲೆ ಶಾತವಾಹನರ ಆಳ್ವಿಕೆಗೆ ಒಪಟ್ಟಿತ್ತು. ಆಧೋನಿ ತಾಲೂಕಿನ ಮ್ಯಾಕಡೋಣಿಯ ಶಾತವಾಹನ ಶ್ರೀ ಪುಲಿಮಾಯಿಯ ಶಾಸನದಲ್ಲಿ ಈ ಪ್ರಾಂತ ಶಾತವಾಹನರದೆಂದು ಉಕ್ತವಾಗಿದೆ. ಹರವು ಎಂದರೆ ವಿಸ್ತಾರವಾದ ಪ್ರದೇಶ, ಬಡಾವಣೆ, ರಾಷ್ಟ್ರ, ಬೀಡು ಮುಂತಾದ ಅರ್ಥಗಳಿವೆ. ಹಿರೇಹಡಗಲಿಯ ತಾಮ್ರ ಶಾಸನದಲ್ಲಿ 'ಸಾತಾಹನಿರಘಟ್ಟ' 'ಶಾತವಾಹನೀಹಾರ' ಎಂದಿದೆ ಇದರಿಂದ ಶಾತವಾಹನರ ಪ್ರದೇಶವೆಂದು ಈ ಭಾಗವನ್ನು ಕರೆಯುತ್ತಿದ್ದುದು ತಿಳಿದುಬರುತ್ತದೆ. ವಿ.ಎಸ್. ಸುಖ್ತನಕರರಂಥ ವಿದ್ವಾಂಸರು ಶಾತವಾಹನರು ಬಳ್ಳಾರಿ ಜಿಲ್ಲೆಯವರೆಂದು ಹೇಳಿದ್ದಾರೆ. ಮ್ಯಾಕಡೋಣಿ ಮತ್ತು ಹಿರೇಹಡಗಲಿಯಲ್ಲಿ ದೊರೆತ ತಾಮ್ರ ಪತ್ರಗಳಲ್ಲಿ ಬಳ್ಳಾರಿ ಜಿಲ್ಲೆಯ ಪ್ರದೇಶವನ್ನು 'ಶಾತಹನಿಹಾರ' 'ಸಾತವನಿರಠ್ಠ'ವೆಂದು ಕರೆದಿರುವುದನ್ನು ಇವರು ಆಧಾರವಾಗಿ ಕೊಡುತ್ತಾರೆ.[೨೬]

ಬ್ರಹ್ಮಗಿರಿ ಮತ್ತು ಚಂದ್ರವಳ್ಳಿಗಳಲ್ಲಿ ಇವರ ಕಾಲಕ್ಕೆ ಸೇರಿಸಬಹುದಾದ ಅವಶೇಷಗಳು ದೊರೆತಿವೆ. ಇವುಗಳಲ್ಲಿ ಮುಖ್ಯವಾಗಿ ಸೀಸದ ನಾಣ್ಯಗಳು ಮತ್ತು ಮಡಿಕೆಗಳು. ಸೀಸದ ನಾಣ್ಯಗಳು ಜನಪ್ರಿಯ ರಾಜನ ಹೆಸರುಗಳನ್ನು ಸಹ ಹೊಮದೆವೆ. ಇವುಗಳನ್ನ ಗುರುತಿಸುವುದು ತುಂಭಾ ಸುಲಭವಾಗುತ್ತದೆ. ಕಳೆದ ಶತಮಾನದ ಪ್ರಾರಂಭದಲ್ಲಿಯೇ ಈ ನಾಣ್ಯಗಳ ಬಗ್ಗೆ ಬೆಳಕು ಚೆಲ್ಲಿದ ಈ.ಜೆ. ರ್‍ಯಾಪ್ಸನ್‌ರವರು ಉವುಗಳನ್ನು ಶಾತವಾಹನರ ಮಾಂಡಲೀಕರಾದ ಚುಟುಗಳ ನಾಣ್ಯಗಳೆಂದು ಗುರುತಿಸಿದರು. ಆದರೆ ೧೯೨೮ರಲ್ಲಿ ಎಂ.ಹೆಚ್. ಕೃಷ್ಣರವರು ಉತ್ಖನನದಲ್ಲಿ ಭೂಮಿಯಿಂದ ಸುಮಾರು ನಾಲ್ಕು ಮೀಟರ್ ಆಳದ ಪದರುಗಳನ್ನು ಗಮನಿಸಿ ಮಧ್ಯದ ಪದರಿನಲ್ಲಿ ಇಟ್ಟಿಗೆಯ ಕಟ್ಟಡದ ಅವಶೇಷವನ್ನು ಗುರುತಿಸಿದರು. ಆಶ್ಚರ್ಯವೆಂದರೆ ಈ ಕಟ್ಟಡದ ಮೇಲ್ಭಾಗದಲ್ಲಿ ಶಾತವಾಹನ, ಮಹಾರತಿ ಮತ್ತು ರೋಮನ್ ನಾಣ್ಯಗಳು ಸಹ ಇಲ್ಲಿ ದೊರೆತು ಈ ಭಾಗದ ಇತಿಹಾಸದ ಮಹತ್ವವನ್ನು ಮತ್ತಷ್ಟು ಹೆಚ್ಚಿಸಿವೆ. ಇಲ್ಲಿ ದೊರೆತ ನಾಣ್ಯಗಳಲ್ಲಿ ಯಜ್ಞಶ್ರೀ ಶಾತಕರ್ಣಿ, ಗೌತಮಿಪುತ್ರ ಶಾತಕರ್ಣಿ, ಮಹಾರತಿ ಮತ್ತು ರೋಮನ್ ಚಕ್ರವರ್ತಿಗಳಾದ ಅಗಸ್ಟಸ್‌ನ ಆಳ್ವಿಕೆಯಲ್ಲಿ ಬಳಕೆಯಲ್ಲಿದ್ದ ನಾಣ್ಯಗಳು ಇಲ್ಲಿ ದೊರೆತವು. ಇವುಗಳಲ್ಲಿ ಟೈಬೇರಿಯಸ್ ನಾಣ್ಯಗಳು, ಮುದ್ರಾಂಕಿತ ನಾಣ್ಯಗಳೂ ಸೇರಿವೆ. ಶಾತವಾಹನರ ಕಾಲದ ಅವಶೇಷಗಳೆಂದೇ ಕರೆಯಲ್ಪಡುವ ಆಕರ್ಷಕ ವಿನ್ಯಾಸದ ರೌಲೆಟೆಡ್ ಮೃತ್ಪಾತ್ರೆಗಳು, ಬಿಳಿಚಿತ್ರಗಳನ್ನು ಹೊಂದಿರುವ ಮೃತ್ಪಾತ್ರೆಗಳು ಸಹ ಈ ಪ್ರದೇಶದಲ್ಲಿ ದೊರೆತಿವೆ.[೨೭]

ಇವುಗಳನ್ನು ಗಮನಿಸಿದಾಗ ಶಾತವಾಹನರ ಸಂಸ್ಕೃತಿಯು ಗಾಢವಾಗಿ ಈ ಭಾಗದಲ್ಲಿ ಬೇರೂರಿತ್ತು ಎಂದು ಹೇಳಬಹುದು. ಶಾತವಾಹನರ ಶಾಸನಗಳಾವೂ ಇಲ್ಲಿ ದೊರೆಯದೇ ಹೋದರೂ ಅವರು ಟಂಕಿಸಿದ ನಾಣ್ಯಗಳು ಅಧಿಕಸಂಖ್ಯೆಯಲ್ಲಿ ದೊರೆತಿದೆ. ಬನವಾಸಿ (ಉತ್ತರ ಕನ್ನಡ ಜಿಲ್ಲೆ), ವಡಗಾಂವ ಮಾಧವಪುರ, ಹಲಸಿ (ಬೆಳವಾಂ ಜಿಲ್ಲೆ) ಕೊಪ್ಪಳ, ಪಟ್ಟದಕಲ್ಲು, ಐಹೊಳೆ (ಬಾಗಲಕೋಟೆ ಜಿಲ್ಲೆ), ಸನ್ನತಿ, ಹರಸಗುಂಡ್ಗಿ, ಕೊಲ್ಲೂರು, ಅಣಬಿ (ಕಲಬುರ್ಗಿ ಜಿಲ್ಲೆ) ಇವೆಲ್ಲವೂ ಕರ್ನಾಟಕದಲ್ಲಿ ಶಾತವಾಹನರ ಪ್ರಮುಖ ನೆಲೆಗಳಾಗಿದ್ದವು ಎಂದು ತಿಳಿದುಬರುತ್ತದೆ. ಈ ನಿಟ್ಟಿನಲ್ಲಿ ಪಕ್ಕದ ತಾಲೂಕು ಹಾಗೂ ಜಿಲ್ಲೆಗಳಲ್ಲಿನ ಪ್ರದೇಶಗಳಲ್ಲಿ ಇವರ ಅಧಿಕಾರ ವ್ಯಾಪ್ತಿ ಇರುವುದರಿಂದ ಭಾಗಶಃ ಪ್ರಸ್ತುತ ವಧ್ಯಯನ ಪ್ರದೇಶವೂ ಸಹ ಭೌಗೋಳಿಕವಾಗಿ ಇವುಗಳಿಗೆ ಹೊಂದಿಕೊಂಡಿರುವುದರಿಂದ ಇವರು ಆಳ್ವಿಕೆ ಮಾಡಿರಬಹುದೆಂದು ಊಹಿಸಬಹುದಾಗಿದೆ.

**ಪಲ್ಲವರು**

ದಕ್ಷಿಣ ಭಾರತದಲ್ಲಿ ಕಂಚಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಅಧಿಕಾರಕ್ಕೆ ಬಂದು ಶಾತವಾಹನರ ನಂತರ ಈ ಪ್ರದೇಶ ಪಲ್ಲವರ ಆಳ್ವಿಕೆಗೆ ಪಳಪಟ್ಟಿತು. ಬಳ್ಳಾರಿಗೆ ಹತ್ತಿರದಲ್ಲಿರುವ ಆಧೋನಿ ತಾಲೂಕಿನ ಮ್ಯಾಕಡೋಣಿ ಶಾಸನವೂ ಕೂಡ ಪಲ್ಲವರ ಕಾಲಕ್ಕೆ ಸೇರಿದುದಾಗಿದೆ. ಇದರಲ್ಲಿ ಬರುವ ಶಾತವಾನೀಹಾರ ಘಟಕವು ಇವರ ಕಾಲದಲ್ಲೂ ಮುಂದುವರಿಯಿತು. ಹಿರೇಹಡಗಲಿಯ ಪ್ರಾಕೃತ ಶಾಸನದಲ್ಲಿ 'ಕಾಂಚಿಪುರಅಗ್ಗಿಟ್ಠೋಮ ವಾಜಪೇಯಸ್ಸಮೇಧಯಾಜೀ ದಮ್ಮ ಮಹಾರಾಜಾಧಿರಾಜೋ ಭಾರದ್ದಾಯೋ ಪಲ್ಲವಾಣ ಸಿವಖಂದವಮೋ' ಎಂದು ಉಲ್ಲೇಖವಿದೆ.[೨೮] ಶಿವಸ್ಕಂದವರ್ಮನು ಕಂಚಿಯ ಪಲ್ಲವ ಅರಸನಾಗಿದ್ದನು. ಈತ ಭಾರದ್ವಜಗೋತ್ರಕ್ಕೆ ಸೇರಿದವನು. ಚಿಲ್ಲರಕೋಡುಂಗ ಗ್ರಾಮದಲ್ಲಿಯ ತೋಟವನ್ನು ದಾನ ನೀಡಿದನು. ಇದೇ ಶಾಸನದಲ್ಲಿ ಉಲ್ಲೇಖಿತನಾದ ಬಸಪ್ಪಸ್ವಾಮಿಯ ಮಗನಾಗಿರಬೇಕು. ಮಹಾರಾಜ ಬಸಪ್ಪಸ್ವಾಮಿ ನೀಡಿದ ದಾನವನ್ನು ಶಿವಸ್ಕಂದವರ್ಮನು ಪುನಃ ದತ್ತಿಯಾಗಿ ನೀಡಿದ್ದಾನೆ. ಈ ಪ್ರದೇಶಕ್ಕೆ ಹೊಂದಿಕೊಂಡಿರುವ ದಾವಣಗೆರೆ ತಾಲೂಕಿನ ಅಣಜಿ ಶಾಸನದಲ್ಲಿ 'ನಣಕ್ಕಾಸಪಲ್ಲವನ' ಉಲ್ಲೇಖವಿದೆ.[೨೯]

ಕ್ರಿ.ಶ ೯೭೩ರಲ್ಲಿ ಕಲ್ಯಾಣ ಚಾಲುಕ್ಯರು ಅಧಿಕಾರಕ್ಕೆ ಬಂದಾಗ, ಪಲ್ಲವರು ಅವರ ಮಂಡಲೀಕರಾಗಿ ನೊಳಂಬವಾಡಿ ಪ್ರದೇಶದ ಆಡಳಿತಾಧಿಕಾರಿಗಳಾಗಿ ಗೋಚರಿಸುತ್ತಾರೆ. ಆಗ ತಮ್ಮನ್ನು ನೊಳಂಗರೆಂದು ಗುರುತಿಸಿಕೊಂಡಿದ್ದಾರೆ. ಕ್ರಿ.ಶ. ೯೮೧ರ ಸಿರಗುಪ್ಪ ತಾಲೂಕಿನ ಕಂಚುಗಾರ ಬೆಳಗಲ್ಲು ಶಾಸನದಲ್ಲಿ ಈ ವಂಶದ ವೀರನೊಳಂಬ ಪಲ್ಲವಪೆರ್ಮಾನಡಿಯ ಕುರಿತು 'ಪಲ್ಲವಾನ್ವಯ ಶ್ರೀ ಪೃಥ್ವೀವಲ್ಲಭ ಪಲ್ಲವ ಕುಳತಿಳಕನೇಕವ್ಯಾಕ್ಯಂ ಕಾಂಚೀಪರುವರೇಶ್ವರಂ ಶ್ರೀಮನ್ವೀರನೊಳಂಬಪಲ್ಲವ ಪೇರ್ಮಾಡಿದೇವರು' ಎಂಬ ಉಲ್ಲೇಖವಿದೆ. ಹಿರೇಹಡಗಲಿಯ[೩೦] ವೀರಭದ್ರ ದೇವಾಲಯದ ಮುಂದೆ ಇರುವ ಶಾಸನದಲ್ಲಿ ಚಾಲುಕ್ಯದೊರೆ ತ್ರಿಭುವನಮಲ್ಲದೇವನ ಆಳ್ವಿಕೆಯಲ್ಲಿ ಆತನ ಮಾಂಡಲೀಕನಾದ ಕಾಂಚೀಪುರವರಾಧೀಶ್ವರ ಮಹಾಮಂಡಳೇಶ್ವರ ಮಹೇಂದ್ರನು ಪುರಂದಲೆ ಮೆರೆಯಾಗಿ ದೇಶವನ್ನು ಆಳುತ್ತ ಕೋಗಳಿಯಲ್ಲಿದ್ದು, ಪೊಸವಡಂಗಿಲೆಯ ೧೨೦ ಮಹಾಜನಗಳ ಮುಂದೆ ಮೂಲಸ್ಥಾನದೇವರ ಸೇವಾಕಾರ್ಯಗಳಿಗೆ ಭೂದಾನ ಮಾಡಿದ್ದನ್ನು ತಿಳಿಸುತ್ತದೆ. ಕಂಚಿಯ ಪಲ್ಲವರು ಮತ್ತು ನೊಳಂಬ ಪಲ್ಲವರ

ಸಂಬಂಧಗಳು ಸ್ಪಷ್ಟವಾಗುವುದಿಲ್ಲ. ಇವರು ಅನೇಕ ಅರಸು ಮನೆತನಗಳೊಂದಿಗೆ ಸಂಬಂಧವನ್ನು ಬೆಳೆಸುವ ಮೂಲಕ ಮಹಾಮಂಡಲೇಶ್ವರ ಪದವಿಯನ್ನು ಹೊಂದಿದ್ದರು.[೩೧] ಈ ನಿಟ್ಟಿನಲ್ಲಿ ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಪಲ್ಲವರ ಆಳ್ವಿಕೆ ಇರುವುದನ್ನು ಸ್ಪಷ್ಟಪಡಿಸುತ್ತದೆ.

**ಕದಂಬರು**

ಬನವಾಸಿಯನ್ನ ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡು ಆಳುತ್ತಿದ್ದ ಕದಂಬರ ನೇರ ಆಳ್ವಿಕೆಗೆ ಬಳ್ಳಾರಿ ಜಿಲ್ಲೆಯು ಒಳಪಟ್ಟಿತ್ತು. ಇವರ ಆಳ್ವಿಕೆಗೆ ಒಳಪಟ್ಟಿದ್ದ ಪ್ರದೇಶವನ್ನ 'ಕದಂಬಳಿಗೆ ನಾಡು' ಎಂದು ಕರೆಯಲಾಗುತ್ತಿತ್ತು. ಇದನ್ನೆ ಮುಂದೆ 'ಕದಂಬಳಿಗೆ ಸಾಸಿರ'ವೆಂದು ಕರೆಯಲಾಗಿದೆ. ಈ ವಿಭಾಗವು ದಾವಣಗೆರೆ ಜಿಲ್ಲೆಯ ಜಗಳೂರು, ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ, ಹರಪನಹಳ್ಳಿ ಮತ್ತು ಹಗರಿಬೊಮ್ಮನಹಳ್ಳಿ, ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ, ತಾಲೂಕುಗಳ ಕೆಲವು ಗ್ರಾಮಗಳನ್ನು ಒಳಗೊಂಡಿತ್ತು. ಉಚ್ಚಂಗಿ ೩೦ ಕದಂಬಗಳಿಗೆ ಸಾಸಿರದ ಉಪವಿಭಾಗವಾಗಿತ್ತು. ಉಚ್ಚಂಗಿಯನ್ನು 'ಉಚ್ಚಶೃಂಗವಿಷಯ'ವೆಂದು ಕದಂಬರ ಕಾಲದಲ್ಲಿ ಕರೆಯಲಾಗುತ್ತಿತ್ತು. ಕದಂಬರಿಗೆ ಇದೊಂದು ಪ್ರಮುಖ ವಿಭಾಗವಾಗಿತ್ತು. ಕಾಕುತ್ಸವರ್ಮನ (ಕ್ರಿಶ ೪೩೫-೪೫೫) ಪುತ್ರ ಕುಮಾರವರ್ಮ ಉಚ್ಚಂಗಿದುರ್ಗದಲ್ಲಿದ್ದು ಆಳುತ್ತಿದ್ದನೆಂದು ಮೊರೆಸ್ ಅವರ ಅಭಿಪ್ರಾಯವಾಗಿದೆ. ಅನಂತರ ಮೃಗೇಶವರ್ಮನ ಸಹೋದರ ಶಿವಮಾಂಧಾತೃವಿನ ಮಗ ಉಚ್ಚಂಗಿಯಲ್ಲಿ ಮಾಂಡಳಿಕನಾಗಿದ್ದು, ಅವನು ಚಕ್ರವರ್ತಿಗೆ ವಿರುದ್ಧ ನಿಂತಿದ್ದುದರಿಂದ ರವಿವರ್ಮನು ತನ್ನ ಸಹೋದರ ಶಿವರಥವನ್ನು ಮಾಂಡಲೀಕನನ್ನಾಗಿ ನೇಮಿಸುತ್ತಾನೆ.[೩೨]

ಹೀಗೆ ಬಳ್ಳಾರಿ ಜಿಲ್ಲೆಯಲ್ಲಿ ಕದಂಬ ವಂಶದವರ ಆಳ್ವಿಕೆ ಪ್ರಾಚೀನ ಕಾಲದಿಂದ ಪ್ರಾರಂಭವಾಯಿತು. ಕ್ರಿಶ. ೯೯೨ರ ಕೋಗಳಿ[೩೩] ಶಾಸನದಲ್ಲಿ ಕಲ್ಯಾಣ ಚಾಲುಕ್ಯರ ಎರಡನೆಯ ತೈಲಪನ ಸಾಮಂತನಾದ ಕದಂಬ ವಂಶದ ಆದಿತ್ಯವರ್ಮನು ಕೋಗಳಿ-೫೦೦ ಮತ್ತು ಸುಂದವತ್ತಿ-೧೨ನ್ನು ಆಳ್ವಿಕೆ ಮಾಡುತ್ತಿದ್ದನೆಂದು ತಿಳಿಸುತ್ತದೆ. ಹಾಗೂ ಕ್ರಿಶ ೧೦೮೫ರ ಹಲ್ಯಂ[೩೪] ಶಾಸನದಲ್ಲಿ ಕಲ್ಯಾಣ ಚಾಲುಕ್ಯ ಮನೆತನದ ತೈಲಪನಿಂದ ಹಿಡಿದು ಆರನೆಯ ವಿಕ್ರಮಾದಿತ್ಯನವರೆಗೆ ವಂಶಾವಳಿಯನ್ನು ನೀಡಿದ್ದು, ಕೋಗಳಿ-೫೦೦, ಕೊಟ್ಟೂರು-೧೨ನ್ನು, ಕೊಟ್ಟೂರಿನಿಂದ ಆಳುತ್ತಿದ್ದ, ಸಾಮಂತನಾದ ಮಯೂರವರ್ಮನ ಸಂತತಿಯಾದ ಕದಂಬ ಕುಲದ ಮಹಾಮಂಡಲೇಶ್ವರ ನಾಚಿದೇವರಸನು ಕೊಟ್ಟೂರಿನ ಉತ್ತರಕ್ಕಿರುವ 'ಯೆಳೆಹದ' ಅಗಸ್ತ್ಯೇಶ್ವರ ದೇವರಿಗೆ ಭೂದಾನ ನೀಡಿದ್ದನ್ನು ಉಲ್ಲೇಖಿಸುತ್ತದೆ. ಕೊಟ್ಟೂರಿನ[೩೫] ಕಲ್ಲೇಶ್ವರ ದೇವಾಲಯದ ಬಳಿಯಿರುವ ಶಾಸನದಲ್ಲಿ ಕದಂಬ ವಂಶದ ಮಹಾಮಂಡಳೇಶ್ವರ ಘಟ್ಟಿಯರಸನು ಕೊಟ್ಟೂರಿನ ಮೂಲಸ್ಥಾನ ರಾಮೇಶ್ವರ ದೇವರಿಗರ ದಾನನೀಡಿದ್ದನ್ನು ತಿಳಿಸುತ್ತದೆ. ಇವುಗಳ ಆಧಾರದಿಂದ ಕದಂಬರ ಆಳ್ವಿಕೆಗೆ ಈ ಪ್ರದೇಶಗಳು ಒಳಪಟ್ಟಿತ್ತೆಂಬುದು ಸ್ಪಷ್ಟವಾಗುತ್ತದೆ.

**ಗಂಗರು**

ಕರ್ನಾಟಕದ ಉತ್ತರ ಭಾಗದಲ್ಲಿ ಕದಂಬರು ಅಧಿಕಾರಕ್ಕೆ ಬರುತ್ತಿದ್ದಂತೆ ಗಂಗರು ಕಾವೇರಿ ನದಿ ಭಾಗಗಳನ್ನೊಳಗೊಂಡ ಆಗ್ನೇಯ ಭಾಗದಲ್ಲಿ ಸ್ವತಂತ್ರ ರಾಜ್ಯವನ್ನು ಸ್ಥಾಪಿಸಿ. ಸುಮಾರು ೨೦೦ ವರ್ಷಗಳ ಕಾಲ ಆಳ್ವಿಕೆ ಮಾಡಿ ನಂತರ ಆದಿ ಚಾಲುಕ್ಯ, ರಾಷ್ಟ್ರಕೂಟ ಅರಸು

ಮನೆತನಗಳ ಅಧೀನರಾಗಿ ರಾಜ್ಯವಾಳಿದರು. ಇವರ ರಾಜ್ಯವನ್ನು ಶಾಸನಗಳಲ್ಲಿ 'ಗಂಗವಾಡಿ-೯೬೦೦೦'ವೆಂದು ಕರೆಯಲಾಗಿದೆ. ಮೈಸೂರು ಜಿಲ್ಲೆಯ ತಲಕಾಡು(ತಲವನಪುರ), ಕುವಲಾಲ (ಕೋಲಾರ), ನಂದಗಿರಿ(ನಂದಿಬೆಟ್ಟ) ಇವರ ರಾಜಧಾನಿಗಳಾಗಿದ್ದವು. ಆನೆ ಇವರ ಲಾಂಛನವಾಗಿತ್ತು. ಆರಂಭದಲ್ಲಿ ಇವರು ಕಂಚಿ ಪಲ್ಲವರ ಕೃಪಾ ಪಾತ್ರಕ್ಕೆ ಒಳಗಾಗಿದ್ದರೂ ಬಾದಾಮಿ ಚಾಲುಕ್ಯ ರಾಜ್ಯ ಸ್ಥಾಪನೆಯೊಂದಿಗೆ ತಮ್ಮ ನಿಷ್ಠೆಯನ್ನು ಚಾಲುಕ್ಯರಲ್ಲಿ ಇರಿಸಿದರು. ರಾಷ್ಟ್ರಕೂಟರು ಅಧಿಕಾರಕ್ಕೆ ಬಂದಾಗ ತಮ್ಮ ಪ್ರಭುತ್ವವನ್ನು ಗಂಗರ ಮೇಲೆ ಹೇರಿದರು. ಸುದೀರ್ಘವಾದ ಆಳ್ವಿಕೆಯಲ್ಲಿ ಈ ಪ್ರದೇಶ ಅವರ ಅಧೀನದಲ್ಲಿತ್ತು ಎಂಬುವುದಕ್ಕೆ ಯಾವುದೇ ಸಮಕಾಲೀನ ಆಧಾರಗಳು ದೊರೆತಿಲ್ಲ.[೩೬] ಆದರೆ ಕಲ್ಯಾಣ ಚಾಲುಕ್ಯ ಮನೆತನದ ತ್ರೈಲೋಕ್ಯಮಲ್ಲದೇವ (ಮೊದಲನೆಯ ಸೋಮೇಶ್ವರ)ನ ಕಾಲದಲ್ಲಿ ಕ್ರಿ.ಶ. ೧೦೫೫ರಕ್ಕು ಹಾಕಿಸಿದ ಕೋಗಳಿ[೩೭] ಜೈನಬಸದಿಯ ಶಾಸನದಲ್ಲಿ ದುರ್ವಿನೀತ(ಗಂಗ ಅರಸ) ನಿಂದ ನೊದಲೇ ಕಟ್ಟಲ್ಪಟ್ಟ ಬಸದಿಯಲ್ಲಿ ಜೀರ್ಣೋದ್ಧಾರಕ್ಕಾಗಿ ಇಂದ್ರಕೀರ್ತಿ ಮುನಿಗಳು ಕೋಗಳಿ ನಾಡಿಗೆ ಒಳಪಡುವ ಇಟಗಿ ಗ್ರಾಮದಲ್ಲಿ ೨೪ ಮತ್ತರು ಭೂಮಿಯನ್ನು ದಾನ ನೀಡಿರುವ ಉಲ್ಲೇಖವಿದೆ.

ಕ್ರಿ.ಶ ೧೦೮೩ರ ಅಂಬಳಿ[೩೮] ಶಾಸನದಲ್ಲಿ ಕಲ್ಯಾಣ ಚಾಲುಕ್ಯ ಮನೆತನದ ತ್ರಿಭುವನಮಲ್ಲ (ಆರನೆಯ ವಿಕ್ರಮಾದಿತ್ಯ)ನ ಕಾಲದಲ್ಲಿ ಹಾಕಿಸಿದ ಶಾಸನದಲ್ಲಿ ಗಂಗ ಅರಸ ದುರ್ವಿನೀತನ ಕಾಲದಲ್ಲಿ ಅರಸನಿಂದ ಮನ್ನಣೆ ಪಡೆದು ಅಮ್ಮೆಳೆಯ ಅಧಿಪತಿಯಾಗಿದ್ದ ಪಶುಪತಿ-ಪಾಂಡ್ಯದೇವನು ನೊಳಂಬವಾಡಿ-೩೨೦೦೦ವನ್ನಾಳುತ್ತಿದ್ದ ಸಮಯದಲ್ಲಿ ಅಮ್ಮೆಳೆಯಲ್ಲಿ ಕಲಿದೇವರ ದೇವಾಲಯವನ್ನು ಕಟ್ಟಿಸಿದ್ದನ್ನು ತಿಳಿಸುತ್ತದೆ ಹಾಗೂ ಗ್ರಾಮದ ಒಡೆಯನಾದ 'ಪಶುಪತಿಭಟ್ಟ'ನೆಂಬಾತನಿಗೆ ದುರ್ವಿನೀತಗಂಗನು ಪರಮಾದರದಿಂದ ರಾಜ್ಯ ಚಿಹ್ನೆಗಳನ್ನು ನೀಡಿ ಗೌರವಿಸಿದ್ದಾನೆ.[೩೯] ಇವುಗಳ ಆಧಾರದಿಂದ ಗಂಗದೊರೆ ದುರ್ವಿನೀತನ ಆಳ್ವಿಕೆಗೆ ಈ ಪ್ರದೇಶಗಳು ಒಳಪಟ್ಟಿತ್ತೆಂಬುದು ಸ್ಪಷ್ಟವಾಗುತ್ತದೆ.

**ಬಾದಾಮಿ ಚಾಲುಕ್ಯರು**

ಬಾದಾಮಿ ಚಾಲುಕ್ಯರು ಕ್ರಿ.ಶ ೬ ರಿಂದ ೮ನೇ ಶತಮಾನದವರೆಗೆ ಆಳ್ವಿಕೆ ಮಾಡಿದರು. ಜಯಸಿಂಹ ಬಾದಾಮಿ ಚಾಲುಕ್ಯರ ವಂಶದ ಮೂಲಪುರುಷ ಮೊದಲನೆಯ ಪುಲಕೇಶಿಯು ಬಾದಾಮಿ ಕೋಟೆಯನ್ನು ಕಟ್ಟಿಸಿ ಸಾಮ್ರಾಜ್ಯದ ವಿಸ್ತರಣೆಗೆ ಅಡಿಪಾಯ ಹಾಕಿದ ದೊರೆ. ಒಂದನೆಯ ಕೀರ್ತಿವರ್ಮ, ಮಂಗಳೇಶ, ಎರಡಯ ಪುಲಕೇಶಿ, ಒಂದನೆಯ ವಿಕ್ರಮಾದಿತ್ಯ, ಎರಡನೆಯ ವಿಕ್ರಮಾದಿತ್ಯ, ರಾಜಪ್ರಮುಖರು. ಇವರ ಆಳ್ವಿಕೆಯ ಅವಧಿಯಲ್ಲಿ ಕರ್ನಾಟಕ, ಆಂಧ್ರಪ್ರದೇಶ , ಮಹಾರಾಷ್ಟ್ರ, ಗುಜರಾತ್, ಮಧ್ಯಪ್ರದೇಶಗಳ ಭೂ-ಭಾಗಗಳು ಇವರ ಆಡಳಿತ ವ್ಯಾಪ್ತಿಗೆ ಒಳಪಟ್ಟಿದ್ದವು. ಇವರು ಗುಹಾಂತರ ದೇವಾಲಯಗಳನ್ನು ಹಾಗೂ ರಚನಾತ್ಮಕ ದೇವಾಲಯಗಳನ್ನು ನಿರ್ಮಿಸಿದರಲ್ಲದೇ ನಾಗರ, ವೇಸರ, ದ್ರಾವಿಡ ಶೈಲಿಯಲ್ಲಿ ದೇವಾಲಯಗಳನ್ನು ಕಟ್ಟಿರುವುದು ಗಮನಾರ್ಹ. ಚಾಲುಕ್ಯರ ಕಾಲದಲ್ಲಿ ನೊಳಂಬವಾಡಿ-೩೨೦೦೦ ಪ್ರಾಂತ್ಯದ ವ್ಯಾಪ್ತಿಗೆ ಪ್ರಸ್ತುತ ಪ್ರದೇಶ ಒಳಪಟ್ಟಿದೆ. ಬಾದಾಮಿ ಚಾಲುಕ್ಯರಲ್ಲಿ ಪ್ರಸಿದ್ಧನಾದ ಇಮ್ಮಡಿ ಪುಲಿಕೇಶಿಯು ಬಾಣದೊರೆ ರಣವಿಕ್ರಮನನ್ನು ಸೋಲಿಸಲು ಬಳ್ಳಾರಿ ಜಿಲ್ಲೆಗೆ ಬಂದಿದ್ದ. ರಣವಿಕ್ರಮನನ್ನು ಸೋಲಿಸಿ 'ಎಳ್ಪತ್ತು ಸಿಂಭಿಗೆ, ನಾಡನೂರ' ಗ್ರಾಮಗಳನ್ನು

ಮಹಾಜನರಿಗೆ ಕೊಟ್ಟದ್ದು ಆಂಧ್ರಪ್ರದೇಶದ ಅನಂತಪುರ ಜಿಲ್ಲೆಯ ಗುತ್ತಿ ತಾಲೂಕಿನ ಪೆದ್ದವಡಗೂರು ಶಾಸನದಿಂದ ಎಳ್ಪತ್ತು ಸಿಂಭಿಗೆ ಮತ್ತು ನಾಡನೂರ ಗ್ರಾಮಗಳನ್ನು ಕೇಳಿ ಪಡೆದುಕೊಳ್ಳುತ್ತಾರೆ. ಬಳ್ಳಾರಿ ತಾಲೂಕಿನ ಕುರುಗೋಡು ಶಾಸನದಲ್ಲಿ ಕುರುಗೋಡಿನ ಜನರು ಈತನಿಂದ ದತ್ತಿ ಪಡೆದುದನ್ನು ತಿಳಿಸುತ್ತದೆ.[೪೦]

ಕ್ರಿ.ಶ. ೬೮೬ರ ವಿನಯಾದಿತ್ಯನ ತಾಮ್ರಪಟ ಶಾಸನದಲ್ಲಿ 'ಪಂಪಾತಟಮಧಿವಸಾತಿ ವಿಜಯಸ್ಕಂಧಾವಾರ' ಎಂದಿದೆ. ಅರಸನು ವಿಜಯದ ಬಿಡಾರವನ್ನು ಪಂಪಾನದಿ ದಂಡೆಯ ಮೇಲೆ ಬಿಟ್ಟಿದ್ದಾಗಿ ಹೇಳಲಾಗಿದೆ. ಉತ್ತಂಗಿಯ ವಿಷ್ಣು ಶಿಲ್ಪ, ಕುಮಾರಸ್ವಾಮಿ ಬೆಟ್ಟದ ಪಾರ್ವತಿ ದೇವಾಲಯ ಹಾಗೂ ಹಂಪಿ ವಿರೂಪಾಕ್ಷ ದೇವಾಲಯದ ಹಿಂಬದಿಯ ಸಮೂಹದಲ್ಲಿರುವ ಮರುಳುಗಲ್ಲಿನ ದೇವಾಲಯಗಳು ಇಲ್ಲಿ ಕಂಡುಬರುವ ಇವರ ಕಾಲದ ಕುರುಹುಗಳಾಗಿವೆ.[೪೧] ಈ ನಿಟ್ಟಿನಲ್ಲಿ ಪಕ್ಕದ ತಾಲೂಕು ಹಾಗೂ ಜಿಲ್ಲೆಗಳಲ್ಲಿನ ಪ್ರದೇಶಗಳಲ್ಲಿ ಇವರ ಅಧಿಕಾರ ವ್ಯಾಪ್ತಿ ಇರುವುದರಿಂದ ಭಾಗಶಃ ಪ್ರಸ್ತುತ ಅಧ್ಯಯನ ಪ್ರದೇಶವೂ ಸಹ ಭೌಗೋಳಿಕವಾಗಿ ಇವುಗಳಿಗೆ ಹೊಂದಿಕೊಂಡಿರುವುದರಿಂದ ಇವರು ಆಳ್ವಿಕೆ ಮಾಡಿರಬಹುದೆಂದು ಊಹಿಸಬಹುದಾಗಿದೆ. ಆದರೆ ಈ ಎರಡು ತಾಲೂಕಿನ ವ್ಯಾಪ್ತಿಯಲ್ಲಿ ಈ ಮನೆತನಕ್ಕೆ ಸಂಬಂಧಿಸಿದ ಯಾವುದೇ ಕುರುಹುಗಳು ಇದುವರೆಗೂ ಲಭ್ಯವಾಗಿಲ್ಲ.

**ರಾಷ್ಟ್ರಕೂಟರು**

ಬಾದಾಮಿ ಚಾಲುಕ್ಯ ಅರಸ ಎರಡನೆಯ ಕೀರ್ತಿವರ್ಮನನ್ನು ಸೋಲಿಸುವುದರ ಮೂಲಕ ದಂತಿದುರ್ಗನು ಕ್ರಿ.ಶ. ೮ನೆಯ ಸಾಮ್ರಾಜ್ಯ ಸ್ಥಾಪಿಸಿದ. ಮಾನ್ಯಖೇಟ ಇವರ ರಾಜಧಾನಿಯಾಗಿತ್ತು. ಒಂದನೆಯ ಕೃಷ್ಣ, ಧ್ರುವ, ನಾಲ್ಕನೆಯ ಗೋವಿಂದ, ಮೂರನೆಯಕೃಷ್ಣ ಆಳ್ವಿಕೆಯನ್ನು ನಡೆಸಿದ್ದಾರೆ. ಮೂರನೆಯ ಕೃಷ್ಣನ ಮಕ್ಕಳಾದ ಖೊಟ್ಟಿಗ ಮತ್ತು ಇಮ್ಮಡಿ ಕರ್ಕರ ಕಾಲದಲ್ಲಿ ಆಡಳಿತ ಕೊನೆಗೊಂಡಿತು. ಗೋದಾವರಿಯಿಂದ ಕಾವೇರಿಯವರೆಗೆ ಇವರ ರಾಜ್ಯ ವ್ಯಾಪಿಸಿತ್ತು. ರಾಷ್ಟ್ರಕೂಟರ ವಾಸ್ತುಶೈಲಿಯಲ್ಲಿ ರಚಿತಗೊಂಡಿರುವ ಅಜಂತ, ಎಲ್ಲೋರ, ಎಲಿಫೆಂಟಾ ಪ್ರದೇಶಗಳು ಪ್ರಸಿದ್ಧಿ ಪಡೆದಿವೆ. ಬಳ್ಳಾರಿ ಪರಿಸರದಲ್ಲಿ ೧೨ ಶಾಸನಗಳು ಕಂಡುಬಂದಿವೆ. ಕೋಗಳಿ ಆಂಜನೇಯ ದೇವಾಲಯದ ಬಳಿಯಿರುವ ಕ್ರಿ.ಶ. ೯೦೮ರ ಶಾಸಸೋಕ್ತ ವೀರಗಲ್ಲಿನಲ್ಲಿ ಎಂಟು ಸಾಲುಗಳಿದ್ದು, ಶಾಸನದಲ್ಲಿ ಹೆಗ್ಗಡೆ ತೊಮ್ಮನೆಂಬುವನ್ನು ಯುದ್ಧವೊಂದರಲ್ಲಿ ಹೋರಾಡಿ ಮಡಿದ ವಿಚಾರವನ್ನು ತಿಳಿಸುತ್ತದೆ. ತೊಮ್ಮನ ಸ್ಮರಣಾರ್ಥ ಆತನ ಪ್ತಿ ಬಳಕ್ಕಳು ಈ ವೀರಗಲ್ಲು ಶಾಸನವನ್ನು ಕಾಯಿಕೋಜ ಎಂಬ ಶಿಲ್ಪಿಯಿಂದ ಕೆತ್ತಿಸಿದ್ದಾಳೆ. ಇದರಲ್ಲಿ ಇಆಜನ ಹೆಸರು ಕೂಡ ಇದೆ. ಆದರೆ ಶಾಸನ ತೃಟಿತಗೊಂಡಿರುವುದರಿಂದ ರಾಜನ ಹೆಸರು ಸ್ಪಷ್ಟವಾಗಿ ಕಾಣುವುದಿಲ್ಲ.[೪೨]

ಕ್ರಿ.ಶ. ೯೨೨ರ ಹರಪನಹಳ್ಳಿ ತಾಲೂಕು ಕುಡುಬಗೆರೆ ವೀರಗಲ್ಲು ಶಾಸನದಲ್ಲಿ ಇಂದ್ರವಲ್ಲಭನ ಮಾಹಾಸಾಮಂತ ಬಿಜ್ಜನು ಕೋಗಳಿ-೫೦೦, ಮಾಸಿವಾಡಿ-೧೪೦ನ್ನು ಆಳುತ್ತಿದ್ದಾಗ, ಕದಂಬವಂಶದ ವೀರನೊಬ್ಬನು ಯುದ್ಧದಲ್ಲಿ ಮಡಿದ ಉಲ್ಲೇಖವಿದೆ. ಅದೇ ಗ್ರಾಮದ ಇನ್ನೊಂದು ಶಾಸನದಲ್ಲಿ ಅಯ್ಯಪ್ಪನ ಮಗ ಅಣ್ಣಿಗನೊಡನೆ ವೀರನೊಬ್ಬ ಯುದ್ಧಮಾಡಿದ ವಿಷಯವಿದೆ. ಬಾಗಳಿ ಶಾಸನ ಇಂದ್ರವಲ್ಲಭನನ್ನು ಹೆಸರಿಸುತ್ತದೆ. ಅವನಿಗೆ 'ರಟ್ಟಕನ್ದರ್ಪ' ಎಂಬ ಬಿರುದಿತ್ತು. ರೊಟ್ಟ ಎಂಬ ಬಿರುದಿತ್ತು. ರೊಟ್ಟ ಎಂಬ ಬಿರುದುಳ್ಳ ಇವನ

ಸಾಮಂತ ಕೋಗಳಿ-೫೦೦ ಮಾಸವಾಡಿ-೧೪೦ನ್ನು ಆಳುತ್ತಿದ್ದನು. ಈ ಮನೆತನದ ಗೋವಿಂದವಲ್ಲಭನ ಕ್ರಿಶ ೯೩೧ರ ಶಾಸನ ಚಿರಸ್ತಿಹಳ್ಳಿಯಲ್ಲಿದೆ. ಇವನ ಆಳ್ವಿಕೆಯಲ್ಲಿ ಪಡಿಗನೊಂಬಾ ಎಂಬ ವೀರನು ಊರ ದಾಳಿಯಲ್ಲಿ ಸತ್ತಾಗ, ಮಾಸವಾಡಿ-೧೪೦ ಹಾಗೂ ಕೋಗಳಿ ನಾಡನ್ನು ಆಳುತ್ತಿದ್ದ ಅಯ್ಯಪ್ಪಯನು ಮರಣಹೊಂದಿದವನ ಕುಟುಂಬಕ್ಕೆ ದಾನ ನೀಡಿದನು.[೪೩] ಇವನ ನಂತರ ಅಧಿಕಾರಕ್ಕೆ ಬಂದ ಮೂರನೆಯ ಕೃಷ್ಣನ ಐದು ಶಾಸನಗಳು ಈ ಪ್ರದೇಶದಲ್ಲಿವೆ. ಕ್ರಿ.ಶ. ೯೪೪ರ ಬಾಗಳಿ ಶಾಸನದಲ್ಲಿ ಕೋಗಳಿ-೫೦೦ ಮತ್ತು ಮಾಸವಾಡಿ-೧೪೦ನ್ನು ಕತ್ಯೆರನೆಂಬುವನು ಆಳುತ್ತಿದ್ದ. ಕ್ರಿ.ಶ. ೯೪೭ರ ಕುಡತಿನಿ ಶಾಸನ ಕೃಷ್ಣನನ್ನು 'ಭಲಕೆನಲಾತನಳಂ ಪುವೊಳಿರೆ' ಎಂದಿದೆ. ಕ್ರಿಶ ೯೬೫ರ ವೇಳೆಗೆ ಕೋಗಳಿ-೫೦೦, ಮಾಸವಾಡಿ-೧೪೦ ಹಾಗೂ ಕುಕ್ಕನೂರು-೩೦ನ್ನು ಸೇರಿದಂತೆ ಈತನ ಮಾಂಡಳೀಕ ರೊಟ್ಟಯ್ಯನೆಂಬುವನು ಆಳುತ್ತಿದ್ದನು. ಈತ ಬಾಗಳಿಯ ಊರೊಡೆಯ ಪಶುಪತಿಭಟ್ಟನಿಗೆ ಅಲ್ಲಿಯ ಎಲ್ಲ ತೆರಿಗೆಯನ್ನು ದಾನ ಬಿಟ್ಟನು. ಕೃಷ್ಣನನ್ನು ಹೆಸರಿಸುವ ಕೊಳಗಲ್ಲು ಶಾಸನದಲ್ಲಿ ಗದಾಧರನೆಂಬುವನು ಅಲ್ಲಿಯ ಗೌಡನಾಗಿದ್ದ. ಇದೇ ಅವಧಿಯಲ್ಲಿ ಶತೃಘ್ನಮಿ ಬಲ್ಲಕುಂದೆ ವಿಷಯವನ್ನು ಆಳುತ್ತಿದ್ದನು.[೪೪]

### ಕಲ್ಯಾಣ ಚಾಲ್ಯುಕರು

ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಕ್ರಿ.ಶ. ೯೯೨ರ ಕೋಗಳಿ[೪೫] ಶಾಸನವೇ ಕಲ್ಯಾಣ ಚಾಲುಕ್ಯ ಮನೆತನದ ಮೊದಲ ಶಾಸನವಾಗಿದೆ. ಇದರಲ್ಲಿ ಕಲ್ಯಾಣ ಚಾಲುಕ್ಯ ಮನೆತನದ ಎರಡನೆಯ ತೈಲಪನ ಕಾಲದ ಅವಧಿಯಲ್ಲಿ ಸಾಮಂತನಾದ ಕದಂಬ ವಂಶದ ಆದಿತ್ಯವರ್ಮನು ಕೋಗಳಿ-೫೦೦ ಮತ್ತು ಸುಂದವತ್ತಿ-೧೨ನ್ನು ಆಳ್ವಿಕೆ ಮಾಡುತ್ತಿದ್ದನೆಂದು ತಿಳಿಸುತ್ತದೆ. ಈ ಶಾಸನದಲ್ಲಿ ಕೋಗಳಿಯ ಸ್ಥಾನಧಿಪತಿಗಳಾದ ಗಣಧರದೇವ ಭಟ್ಟಾರಕನ ಸಮ್ಮುಖದಲ್ಲಿ ಪೋಚಯ್ಯಸೆಟ್ಟಿ, ಬದ್ಧಿಮಯ್ಯಸೆಟ್ಟಿ, ಮರಮಾಯ್ಯ ಇತ್ಯಾದಿ ವ್ಯಕ್ತಿಗಳಿಗೆ ಹಾಗೂ ಪಂಚಮಠರ ಸ್ಥಾನಕ್ಕೆ ಹಂಚಿಕೊಟ್ಟ ಭೂದಾನ ಮತ್ತು ತೆರಿಗೆಗಳನ್ನು ಹಾಗೂ ಭೂಮಿಯ ಗುಣವನ್ನು ಅವಲಂಬಿಸಿ ಅಂದರೆ ಫಲವತ್ತತೆಯನ್ನು ಅವಲಂಭಿಸಿ ಭೂಕಂದಾಯವನ್ನು ವಸೂಲು ಮಾಡಲು ತಿಳಿಸದೆ. ಕ್ರಿ.ಶ. ೧೦೩೪ರ ಚಿಮ್ಮಹಳ್ಳಿ[೪೬] ಶಾಸನದಲ್ಲಿ ಎರಡನೆ ಜಯಸಿಂಹನು ಕದಂಬಳಿಗೆ-೧೦೦೦, ಕೋಗಳಿ-೫೦೦, ಬಲಕುಂದೆ-೩೦೦, ಕುಡಿಹರವಿ-೭೦, ಕರಿವಿಡಿ-೩೦, ಮಾಸವಾಡಿ ನಾಡಿನ ಐದು ಗ್ರಾಮಗಳನ್ನು ಆಳುತ್ತಿದ್ದಾಗ ನೆಲ್ಕುದರೆಯನ್ನು ಆಳುತ್ತಿದ್ದ ಆತನ ಸಾಮಂತ ಕೇತೆಯನಾಯಕನು ಕಲಿದೇವರಿಗೆ ಭೂದಾನ ನೀಡಿದ್ದನ್ನು ತಿಳಿಸುತ್ತದೆ.

ಕ್ರಿ.ಶ. ೧೦೪೫ರ ಮೋರಿಗೇರಿ[೪೭] ಶಾಸನದಲ್ಲಿ ಒಂದನೆಯ ಸೋಮೇಶ್ವರನು ಆಡಳಿತ ಮಾಡುತ್ತಿದ್ದ ಸಮಯದಲ್ಲಿ ಉದಯಾದಿತ್ಯನಿಗೆ ಪುಣ್ಯವಾಗಲೆಂದು ದಂಡನಾಯಕ ತಿಕಣ್ಣನ ನೇತೃತ್ವದಲ್ಲಿ ಲೆಂಕ-೧೦೦೦ರ ಸತ್ರದಲ್ಲಿ ೨೪ ಜನರ ಊಟಕ್ಕೆ ವ್ಯವಸ್ಥೆ ಮಾಡಿದರು ಮತ್ತು ನೊಳಂಬೇಶ್ವರ, ಲೆಂಕೇಶ್ವರ ದೇವಾಲಯದ ಅಂಗಭೋಗ ಹಾಗೂ ರಂಗಭೋಗಕ್ಕೆ ದಾನನೀಡಿದ್ದನು ತಿಳಿಸುತ್ತದೆ. ಇದೇ ಗ್ರಾಮದ ಕ್ರಿ.ಶ. ೧೦೪೬ರ[೪೮] ಶಾಸನದಲ್ಲಿ ಇವನ ದಂಡನಾಯಕ ಸೋವಿಮಯ್ಯನು ಸೋಮತೀರ್ಥವೆಂಬ ಬಾವಿಯನ್ನು ಕಟ್ಟಿಸಿ ಅದಕ್ಕೆ ಸೋಮತೀರ್ಥವೆಂದು ಹೆಸರಿಟ್ಟು, ಕೆರೆ, ಬಾವಿ, ತೋಟದ ಭೂಮಿಯನ್ನು ದಾನ ನೀಡಿದನ್ನು

ಉಲ್ಲೇಖಿಸುತ್ತದೆ. ಕ್ರಿ.ಶ. ೧೦೬೩ರ ಅಂಬಳಿ[೪೯] ಶಾಸನದಲ್ಲಿ ಚಾಲುಕ್ಯರ ತೈಲಪನಿಂದ ಆರನೆಯ ವಿಕ್ರಮಾದಿತ್ಯನವರೆಗೆ ವಂಶಾವಳಿಯ ವರ್ಣನೆಯನ್ನು ತಿಳಿಸುತ್ತದೆ. ಇದೇ ರೀತಿಯಲ್ಲಿ ಕ್ರಿ.ಶ. ೧೦೬೫ರ ಹಲ್ಯಂ[೫೦] ಶಾಸನದಲ್ಲಿಯೂ ವಂಶಾವಳಿಯನ್ನು ನೀಡಿದ್ದು ಕೋಗಳಿ-೫೦೦, ಕೊಟ್ಟೂರು-೧೨ನ್ನು ಕೊಟ್ಟೂರಿನಿಂದ ಆಳುತ್ತಿದ್ದ, ಸಾಮಂತನಾದ ನಾಚಿದೇವರಸನು ಕೊಟ್ಟೂರಿನ ಉತ್ತರಕ್ಕಿರುವ 'ಯೆಳೆಹದ' ಅಗಸ್ತ್ಯೇಶ್ವರ ದೇವರಿಗೆ ಭೂದಾನ ನೀಡಿದ್ದನ್ನು ತಿಳಿಸುತ್ತದೆ. ಕ್ರಿ.ಶ. ೧೧೪೪ರ ಉಲುವತ್ತಿ[೫೧] ಶಾಸನದಲ್ಲಿ ಎರಡನೆಯ ಜಗದೇಕಮಲ್ಲನ ಮಹಾಮಂಡಲೇಶ್ವರ ವೀರಪಾಂಡ್ಯದೇವನು ನೊಳಂಬವಾಡಿ-೩೨೦೦೦ವನ್ನಾಳುತ್ತಿದ್ದ ಸಮಯದಲ್ಲಿ ಕದಂಬ ಮಾಚಿದೇವನು ಕೋಗಳಿ-೫೦೦ ಆಳುತ್ತಿದ್ದಾಗ ಉಯ್ಯಲ್ವತ್ತಿಯ ನಾಳ್ಪ್ರಭು ಸಿಂಗಗಾವುಡನ ಮಗ ಅಜ್ಜಗಾವುಂಡನು ರಾಮೇಶ್ವರ ದೇವಾಲಯಕ್ಕೆ ನೀಡಿದ ದಾನವನ್ನು ತಿಳಿಸುತ್ತದೆ. ಕ್ರಿ.ಶ. ೧೧೪೭ರ ಅಲಬೂರು[೫೨] ಶಾಸನದಲ್ಲಿ ಕಲ್ಯಾಣ ಚಾಲುಕ್ಯರ ಎರಡನೆಯ ಜಗದೇಕಮಲ್ಲನ ಮಹಾಮಂಡಳೇಶ್ವರ ವೀರಪಾಂಡ್ಯದೇವನು ನೊಳಂಬವಾಡಿ-೩೨೦೦೦ವನ್ನು ಮತ್ತು ನಾಚಿದೇವರಸನು ಕೋಗಳಿ-೫೦೦ನ್ನು ಆಳುತ್ತಿದ್ದನ್ನು ತಿಳಿಸುತ್ತದೆ. ವಾಸ್ತುಶಿಲ್ಪವು ಇಲ್ಲಿನ ಸಾಂಸ್ಕೃತಿಕ ಚರಿತ್ರೆಯ ಮೇಲೆ ವಿಶೇಷವಾದ ಪ್ರಭಾವ ಬೀರಿದ ಚಾಲುಕ್ಯ ವಾಸ್ತುವಿನಲ್ಲಿ ಅನೇಕ ದೇವಾಲಯಗಳು ಇಲ್ಲಿ ನಿರ್ಮಾಣಗೊಂಡಿರುವುದು ತಿಳಿದು ಬರುವುದು. ಕದಂಬಳಿಗೆ ಹಾಗೂ ನೊಳಂಬಳಿಗೆ ಪ್ರಾಂತ್ಯಗಳಲ್ಲಿ ಚಾಲುಕ್ಯರ ಸಾಮಂತರಾಗಿ ಆಳುವ ಅನೇಕ ಸಾಮಂತ ಮನೆತನಗಳು ಚಾಲುಕ್ಯ ವಾಸ್ತುಶೈಲಿಯ ದೇವಾಲಯಗಳನ್ನು ನಿರ್ಮಿಸಿದ್ದಾರೆ. ಅವುಗಳಲ್ಲಿ ಅಂಬಳಿ ಕಲ್ಲೇಶ್ವರ, ಚಿಲಗೋಡು ಕಲ್ಲೇಶ್ವರ, ಮೋರಿಗೆರಿಯ ಉದ್ಭಿಬಸವೇಶ್ವರ, ಹನಸಿಯ ರಾಮೇಶ್ವರ, ಹುಲಿಕೆರೆಯ ಕಲ್ಲೇಶ್ವರ, ಹಿರೇಹೆಗ್ಡಾಳ್ ಈಶ್ವರ, ಉಜ್ಜಿನಿ ಮರುಳಸಿದ್ಧೇಶ್ವರ, ಹರಾಳು ಕಲ್ಲೇಶ್ವರ ದೇವಾಲಯಗಳು ಮುಖ್ಯವಾಗಿವೆ. ಇವುಗಳನ್ನು ಸ್ಥಳೀಯವಾಗಿ ಲಭ್ಯವಿರುವ ಹಸಿರು, ಕಪ್ಪು, ಬಿಳಿಕಣ ಶಿಲೆಗಳಲ್ಲಿ ನಿರ್ಮಿನಿದ್ದಾರೆ. ಚಾಲುಕ್ಯ ಶೈಲಿಯ ಅನೇಕ ಅಂಶಗಳು ಇವುಗಳ ಮೇಲೆ ಪ್ರಭಾವ ಬೀರಿರುವುದು ಕಂಡುಬರುತ್ತದೆ. ಹೀಗೆ ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಅನೇಕ ಶಾಸನಗಳು ಹಾಗೂ ದೇವಾಲಯಗಳು ಇರುವುದರಿಂದ ಈ ಪ್ರದೇಶವು ಅವರ ನೇರವಾದ ಆಳ್ವಿಕೆಗೆ ಒಳಪಟ್ಟಿತ್ತೆಂದು ಸ್ಪಷ್ಟವಾಗಿ ಹೇಳಬಹುದು.

**ಕಲಚೂರಿಗಳು**

ಕಲ್ಯಾಣದ ಚಾಲುಕ್ಯರನ್ನು ಸುಮಾರು ೩೫ ವರ್ಷಗಳ ಕಾಲ ಬದಿಗೊತ್ತಿ ಕಲಚೂರಿಗಳು ಆಳ್ವಿಕೆ ಮಾಡಿದರು. ಇವರು ಮರ್ಧ್ಯಯ ಭಾರತದ ಕಲಚೂರಿ ವಂಶದ ಹೈಹೆಯ ಕುಲಕ್ಕೆ ಸೇರಿದವರು ಹೈಹೆಯರು ನರ್ಮದಾ ತೀರದ ಮಾಹಿಷ್ಮತಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡಿದ್ದರು. ಇದನ್ನು 'ಮಾಹಿಷ್ಮತೀಪುರವರಾಧೀಶ್ವರ' ಎಂಬ ತಮ್ಮ ಬಿರುದಿನ ಮೂಲಕ ಅಮರರಾಗಿದ್ದಾರೆ. ಉತ್ತರದ ಕಾಲಂಜರಪುರದಿಂದ ಬಂದರೆಂಬುದನ್ನು ತೋರಿಸಲು 'ಕಾಳಂಜರಪುರವರಾಧೀಶ್ವರ' ರೆಂದೂ ತಮ್ಮನ್ನು ಕರೆದುಕೊಂಡಿದ್ದಾರೆ. ಶಿವಭಕ್ತರಾದ ಇವರು 'ಸುವರ್ಣವೃಷಭ' ಲಾಂಛನವನ್ನು ಹೊಂದಿದ್ದಾರೆ. ಕರ್ನಾಟಕದಲ್ಲಿ ಅಧಿಕಾರಕ್ಕೆ ಬಂದ ಕಲಚೂರಿಗಳು 'ತರಿಕಾಡನಾಡನ್ನು' ತಮ್ಮ ನೆಲೆಯನ್ನಾಗಿ ಮಾಡಿಕೊಂಡರು. ಆ ನಾಡಿನ ಮುಖ್ಯ ಪಟ್ಟಣ ಮಂಗಳವೇಡವು ಅವರ ಪರಂಪರಾಗತ ರಾಜಧಾನಿಯಾಗಿ ಮೆರೆಯಿತು.[೫೩]

ಒಂದನೆಯ ಬಿಜ್ಜಳ ಮತ್ತು ಅವನ ಮಗ ಕನ್ನಮರಸರು ಚಾಲುಕ್ಯರ ಅಧೀನರಾಗಿ ರಾಜಕೀಯದಲ್ಲಿ ಭಾಗವಹಿಸಿದ್ದರು. ಈ ಅವಧಿಯಲ್ಲಿ ಮಹಾಮಂಡಳೇಶ್ವರ ಕನ್ನಮರಸ ಮಂಗಳವೇಡದಿಂದ ರಾಜ್ಯವಾಳುತ್ತಿದ್ದನು. ಇವನ ಮಗ ಜೋಗಮನು ತನ್ನ ಮಗಳು ಸಾವಳದೇವಿಯನ್ನು ಆರನೆಯ ವಿಕ್ರಮಾದಿತ್ಯನಿಗೆ ಮದುವೆ ಮಾಡಿ ಕೊಡುವ ಮೂಲಕ ಚಾಲುಕ್ಯ-ಕಲಚೂರಿ ಸಂಬಂಧವನ್ನು ಸ್ಥಿರಗೊಳಿಸಿದನು. ಇವನ ಮಗ ಪೆರ್ಮಾಡಿಯು ವಿಕ್ರಮಾದಿತ್ಯ ಹಾಗೂ ಚಂದಲದೇವಿಯರ ಮಗಳಾದ ನಾಗಲದೇವಿಯನ್ನು ಮದುವೆಯಾಗುವ ಮೂಲಕ ಮೊದಲಿನ ಸಂಬಂಧವನ್ನು ಮತ್ತಷ್ಟು ನಿಕಟಗೊಳಿಸಿ ಕಲಚೂರಿಯರ ಜಾಜಕೀಯ ಸ್ಥಾನವನ್ನು ಸುಭದ್ರಗೊಳಿಸಿದನು. ಮೂರನೆಯ ಸೋಮೇಶ್ವರನ ಕಾಲದಲ್ಲಿ ತಾನು ಸ್ವತಂತ್ರನೆಂಬಂತೆ ತನ್ನ ಆಳ್ವಿಕೆಯ ಹನ್ನೆರಡನೆಯ ವರ್ಷವನ್ನು ಉಲ್ಲೇಖಿಸಿ ಶಾಸನ ಬರೆಸಿದ್ದಾನೆ. ಈ ಅವಕಾಶವನ್ನು ಮುಂದೆ ಎರಡನೆಯ ಬಿಜ್ಜಳನೂ ಅನುಸರಿಸಿದ.[೫೪]

ಬಳ್ಳಾರಿ ಪ್ರದೇಶದಲ್ಲಿ ಬಿಜ್ಜಳನ ಕ್ರಿ.ಶ. ೧೧೬೨ರ ನೀಲಗುಂದ ಶಾಸನ ಮೊದಲನೆಯದು. ಇದರಲ್ಲಿ ಬಿಜ್ಜಳನನ್ನು 'ತ್ರಿಭುವನಮಲ್ಲ ಭುಜಬಳ ಚಕ್ರವರ್ತಿ ಬಿಜ್ಜಳದೇವರು' ಆಳುತ್ತಿದ್ದುದನ್ನು ಹೇಳಲಾಗಿದೆ. ಈತನಿಗೆ ಅಧೀನನಾಗಿ ವೀರಪಾಂಡ್ಯದೇವನು ಕೋಗಳಿ-೫೦೦ ಕದಂಬಳಿಗೆ-೧೦೦೦ ವಿಭಾಗಗಳನ್ನು ಆಳಿತ್ತಿದ್ದನು. ಕ್ರಿ.ಶ. ೧೧೭೨ ಸುಮಾರಿಗೆ ಕಲಚೂರಿ ವಂಶದ ರಾಯಮುರಾರಿ ಭುಜಬಳಮಲ್ಲ ಸೋಮೇಶ್ವರ ದೇವನಿಗೆ ಈ ಪ್ರದೇಶ ಒಳಪಟ್ಟಿದ್ದಿತು. ಕುರುಗೋಡಿನ ಕ್ರಿ.ಶ. ೧೧೭೬ ಶಾಸನದಲ್ಲಿ ರಾಯಮುರಾರಿ ಸೋವಿದೇವನು ರಾಜ್ಯ ಪರಿಪಾಲಿಸುತ್ತಿರುವಾಗ ಮಹಾಮಂಡಳೇಶ್ವರ ರಾಚಮಲ್ಲನು ಕಲ್ಲಿಸೆಟ್ಟಿ ಪ್ರತಿಷ್ಠಾಪಿಸಿದ ಕಲಿದೇವರಿಗೆ ದಾನ ಬಿಡುತ್ತಾನೆ. ಕ್ರಿ.ಶ. ೧೧೭೭ ಜೂನ್ ೨೬ ಸುಮಾರಿಗೆ ಕಲಚೂರಿ ವಂಶದ ಸಂಕಮದೇವನು ಕಲ್ಯಾಣದಿಂದ ಆಳುತ್ತಿದ್ದನೆಂದು ಕುರುಗೋಡಿನ ಶಾಸನ ತಿಳಿಸುತ್ತದೆ. ಶಾಸನದಲ್ಲಿ 'ಶ್ರೀಮತ್ಸಂಖ ವರ್ಮದೇವ ಚಕ್ರವರ್ತಿ' ಎಂದು ಬರುತ್ತಿದ್ದು ಕಲ್ಯಾಣದಿಂದ ಆಳುತ್ತಿದ್ದನೆಂದು ಹೇಳಲಾಗಿದೆ.[೫೫] ಇವು ಕಲಚೂರಿ ವಂಶದವರು ಈ ಪ್ರದೇಶವನ್ನು ಆಳ್ವಿಕೆ ಮಾಡಿದ್ದರು ಎಂಬುದಕ್ಕೆ ಶಾಸನಗಳು ಆಧಾರಗಳಾಗಿವೆ.

**ನೊಳಂಬರು**

ಕಲ್ಯಾಣ ಚಾಲುಕ್ಯರ ಮಹಾಮಂಡಳೇಶ್ವರರಾಗಿ ಕಂಪಿಲಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಡಳಿತ ನಡೆಸಿದರು. ನೊಳಂಬರ ಮೂಲ ಅದರ ಅರ್ಥ ಸ್ವರೂಪವನ್ನು ಅನೇಕ ವಿದ್ವಾಂಸರು ಕೋಲ್ಹಾಪುರದ ಕ್ರಿ.ಶ. ೧೧೧೫ರ ಶಿಲಾಹಾರರ ಶಾಸನದ ಉಲ್ಲೇಖವನ್ನಿಟ್ಟುಕೊಂಡು ಪೌರಾಣಿಕ ಹಿನ್ನೆಲೆ ಮತ್ತು ಭಾಷಾವಾರು ಮೂಲದಿಂದ ವಿವಿಧ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ನೊಳಂಬರ ಮೂಲಪುರುಷ ತ್ರಿನಯನ ಪಲ್ಲವ, ಕಂಚಿಪತಿ ಎಂದು ಶಾಸನದಲ್ಲಿ ವರ್ಣಿತವಾಗಿದೆ. ಆಂಧ್ರಪ್ರದೇಶದ ಮಡಕಶಿರೂರ ತಾಲೂಕಿನ ಇಂದಿನ ಹೇಮಾವತಿ ಅಥವಾ ಪ್ರಾಚೀನಕಾಲದ ಹೆಂಜೇರನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ಮಾಡಿದ ನೊಳಂಬರನ್ನು ಪಲ್ಲವ ವಂಶದವರೆಂದು ಶಾಸನಗಳಲ್ಲಿ ಕರೆಯಲಾಗಿದೆ. ಆದರೆ ಕಂಚಿಯ ಪಲ್ಲವರು ತಮ್ಮನ್ನು ನೊಳಂಬರೆಂದು ಯಾವ ಶಾಸನಗಳಲ್ಲೂ ಗುರುತಿಸಿಕೊಂಡಿಲ್ಲ. ಶಾಸನಗಳು ಇವರನ್ನು ಕಾಂಚಿಪುರವರೇಶ್ವರ, ಪಲ್ಲವ ಕುಲತಿಲಕ, ಪಲ್ಲವಾನ್ವಯ, ಮುಂತಾದ

ಪ್ರಶಸ್ತಿಗಳೊಂದಿಗೆ ನೊಳಂಬ, ನೊಣಂಬ, ನೊಂಬ, ನುಳುಂಬ ಎಂದು ಮುಂತಾಗಿ ಶಾಸನಗಳು ಉಲ್ಲೇಖಿಸಿವೆ.[೫೬]

ಕರ್ನಾಟಕ, ಆಂಧ್ರಪ್ರದೇಶ ಮತ್ತು ತಮಿಳುನಾಡು ಪ್ರದೇಶಗಳನ್ನೊಳಗೊಂಡಂತೆ ನೊಳಂಬರ ಆಳ್ವಿಕೆಯನ್ನು ಮೂರು ಭಾಗಗಳಲ್ಲಿ ವಿಂಗಡಿಸಬಹುದು. ಬಾದಾಮಿ ಚಾಲುಕ್ಯರ ಕಾಲದಲ್ಲಿ ಪಲ್ಲವರೊಂದಿಗೆ ರಾಜಕೀಯ ಸಂಘರ್ಷಗಳು ನಡೆಯುತ್ತ ಬಂದವು. ರಾಷ್ಟ್ರಕೂಟರ ಕಾಲದಲ್ಲಿ ರಾಷ್ಟ್ರಕೂಟ ಮತ್ತು ಗಂಗರ ಮಧ್ಯೆ ಇದೇ ರೀತಿಯ ಸಂಘರ್ಷಗಳು ನಡೆದವು. ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಚಾಲುಕ್ಯ ಮತ್ತು ಚೋಳರ ಮಧ್ಯೆ ಘರ್ಷಣೆಗಳಾದವು. ಈ ಒಟ್ಟು ರಾಜಕೀಯ ಹಿನ್ನೆಲೆಯಲ್ಲಿ ನೊಳಂಬರು ವಿವಿಧ ಅರಸು ಮನೆತನಗಳಿಗೆ ಮಾಂಡಳೀಕ ಅರಸರಾಗಿ ಅವರ ಮಧ್ಯದಲ್ಲಿ ನಡೆಯುತ್ತಿದ್ದ ರಾಜಕೀಯ ಸಂಘರ್ಷಗಳಲ್ಲಿ ಪಾಲ್ಗೊಂಡು ರಾಜ್ಯ ವಿಸ್ತರಣೆಯಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತ ಬಂದರು. ಮೊದಲು ಹೇಮಾವತಿ, ಬರಗೂರು, ಆವನಿಯವರೆಗಿದ್ದ ರಾಜ್ಯ ಎರಡನೆಯ ಹಂತದಲ್ಲಿ ಉಚ್ಚಂಗಿದುರ್ಗ, ದಕ್ಷಿಣಕ್ಕೆ ಧರ್ಮಪುರಿಯವರೆಗೆ ವಿಸ್ತಾರ ಪಡೆಯಿತು. ಮೂರನೆಯ ಹಂತದಲ್ಲಿ ಬಳ್ಳಾರಿ ಜಿಲ್ಲೆಯ ಕಂಪಿಲಿ ಆಡಳಿತದ ಕೇಂದ್ರವಾಗಿ ಬಳ್ಳಾರಿ, ಚಿತ್ರದುರ್ಗ, ದಾವಣಗೆರೆ, ಆಂಧ್ರಪ್ರದೇಶದ ಕೆಲವು ಭಾಗಗಳನ್ನೊಳಗೊಂಡಿತು. ಕೊನೆಯ ಕಾಲದಲ್ಲಿ ಪಟ್ಟದಕಲ್ಲಿನವರೆಗೂ ವಿಸ್ತಾರ ಪಡೆಯಿತು.[೫೭]

ನೊಳಂಬರು ಕ್ರಿ.ಶ. ೮ನೆಯ ಶತಮಾನದಲ್ಲಿ ಹೆಂಜೇರು ಅಥವಾ ಹೇಮಾವತಿಯಲ್ಲಿ ಆಳುತ್ತಿದ್ದರು. ಅದು ಅವರ ಮೊದಲ ರಾಜಧಾನಿಯಾಗಿದತ್ತು. ೧೧ನೆಯ ಶತಮಾನದಲ್ಲಿ ಇವರ ಆಡಳಿತ ಬಳ್ಳಾರಿ ಜಿಲ್ಲೆಯ ಕಂಪಿಲಿಗೆ ಸ್ಥಳಾಂತರಗೊಂಡಿತು. ಕಲ್ಯಾಣ ಚಾಲುಕ್ಯರೊಂದಿಗೆ ಸೌಖ್ಯ ಬೆಳೆಸಿಕೊಂಡು ವೈವಾಹಿಕ ಸಂಬಂಧಗಳಾಗಿದ್ದು, ಚೋಳರ ದಾಳಿ ಕರ್ನಾಟಕದ ಮೇಲೆ ಹೆಚ್ಚಾಗತೊಡಗಿ, ಈ ಭಾಗದ ರಕ್ಷಣೆಯ ಜವಾಬ್ದಾರಿಯನ್ನು ವಹಿಸಿದರು. ಮೊದಲು ಗಂಗ ಮತ್ತು ರಾಷ್ಟ್ರಕೂಟರಿಗೆ ಸಾಮಂತರಾಗಿದ್ದು, ನಂತರ ಅಧಿಕಾರಕ್ಕೆ ಬಂದಂತಹ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ನೊಳಂಬವಾಡಿ-೩೨೦೦೦ದ ಅಧಿಪತಿಗಳಾಗಿ ಆರನೆಯ ವಿಕ್ರಮಾದಿತ್ಯನವರೆಗೂ ಅಧಿಕಾರದಲ್ಲಿದ್ದರು.

ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿರುವ ಆಡಳಿತ ವಿಭಾಗಗಳ ಉಲ್ಲೇಖವು ಕ್ರಿ.ಶ. ೧೦೩೪ರ ಚಿಮ್ಮಹಳ್ಳಿಯ[೫೮] ಶಾಸನದಲ್ಲಿ ಕಲ್ಯಾಣ ಚಾಲುಕ್ಯ ಎರಡನೆಯ ಜಯಸಿಂಹನ ಮಹಾಮಂಡಳೇಶ್ವರನಾಗಿ ನೊಳಂಬ ಪಲ್ಲವ ಪೆರ್ಮಾನಡಿಯು ಕದಂಬಳಿಗೆ-೧೦೦೦, ಕೋಗಳಿ-೫೦೦, ಬಲಕುಂದೆ-೩೦೦, ಕುಡಿಹರವಿ-೭೦, ಕರಿವಿಡಿ-೩೦ ಮತ್ತು ಮಾಸವಾಡಿ ನಾಡಿನ ಐದು ಗ್ರಾಮಗಳನ್ನು ಆಳುತ್ತಿದ್ದಾಗ ನೆಲ್ಕುದರೆಯನ್ನು ಆಳುತ್ತಿದ್ದ ಆತನ ಸಾಮಂತ ಕೇತೆನಾಯಕನು ಕಲಿದೇವರಿಗೆ ಭೂದಾನ ನೀಡಿದ್ದನ್ನು ತಿಳಿಸುತ್ತದೆ. ಕ್ರಿಶ ೧೦೪೫ರ ಮೋರಿಗೇರಿ[೫೯] ಶಾಸನದಲ್ಲಿ ಕಲ್ಯಾಣ ಚಾಲುಕ್ಯ ಒಂದನೆಯ ಸೋಮೇಶ್ವರನ ಮಹಾಮಂಡಳೇಶ್ವರ ಪಲ್ಲವ ಸಂತತಿಯ ನೊಳಂಬ ಪಲ್ಲವ ಪೆರ್ಮಾನಡಿಯು ಬಲ್ಲಕುಂದೆ-೩೦೦, ಕೋಗಳಿ-೫೦೦, ಕುಡಿಹರವಿ-೭೦, ಕರಿವಿಡಿ-೩೦ ಮತ್ತು ನೊಳಂಬವಾಡಿ-೩೨೦೦೦ಗಳನ್ನಾಳುತ್ತಿದ್ದನು. ಈ ಸಮಯದಲ್ಲಿ ಉದಯಾದಿತ್ಯನಿಗೆ ಪುಣ್ಯವಾಗಲೆಂದು ನೊಳಂಬೇಶ್ವರರ ಲೆಂಕೇಶ್ವರ ದೇವಾಲಯಗಳಿಗೆ ನೀಡಿದ ದಾನವನ್ನು ಉಲ್ಲೇಖಿಸುತ್ತದೆ. ಕ್ರಿ.ಶ.

೧೦೪೭ರ ಕೋಗಳಿಯ[೬೦] ಶಾಸನೋಕ್ತ ವೀರಗಲ್ಲು ಶಾಸನದಲ್ಲಿ ನನ್ನಿನೊಳಂಬ ಪಲ್ಲವ ಪೆರ್ಮಾಡಿಯ ಕಾಲದಲ್ಲಿ ಘಟ್ಟದೇವನ ಆಜ್ಞೆಯಂತೆ ಏಚನಾಯಕನೆಂಬುವನು ಕುದುರೆಯೇರಿಗೊಂಡು ಹೋಗಿ ಹಸುಗಳನ್ನು ಕದ್ದೊಯ್ಯುತ್ತಿದ್ದ ಕಳ್ಳರನ್ನು ಸದೆಬಡಿದು ಅದೇ ಹೋರಾಟದಲ್ಲಿ ತಾನು ಮಡಿಯುತ್ತಾನೆಂದು ಶಾಸನ ಉಲ್ಲೇಖಿಸುತ್ತದೆ. ಕ್ರಿ.ಶ. ೧೦೫೨ರ ತಳಕಲ್ಲು[೬೧] ಶಾಸನದಲ್ಲಿ ನನ್ನಿನೊಳಂಬ ಪಲ್ಲವ ಪೆರ್ಮಾನಡಿಯು ಬಲ್ಲಕುಂದೆ-೩೦೦, ಕೋಗಳಿ-೫೦೦, ಕದಂಬಳಿಗೆ-೧೦೦೦ನ್ನು ಬೀಳಿವೃತ್ತಿಯಾಗಿ ಆಳುತ್ತಿದ್ದಾಗ. ಇವನ ಅಧೀನನಾದ ಸಿಂದರಸ, ಬರ್ಮದೇವನು ಕೋಗಳಿ-೫೦೦ಕ್ಕೆ ಸೇರಿದ ತೊಣಕಲಿ, ಹಲುಮಯಿ-೧೨ನ್ನು ಆಳುತ್ತಿದ್ದನ್ನು ತಿಳಿಸುತ್ತದೆ. ಈ ನಿಟ್ಟಿನಲ್ಲಿ ಪ್ರಸ್ತುತ ಅಧ್ಯಯನ ಪ್ರದೇಶವು ನೊಳಂಬರ ಆಳ್ವಿಕೆಗೆ ಒಳಪಟ್ಟಿತ್ತೆಂದು ಸ್ಪಷ್ಟವಾಗಿ ಹೇಳಬಹುದು.

**ಪಾಂಡ್ಯರು**

ದಕ್ಷಿಣ ಭಾರತದಲ್ಲಿ ಪಾಂಡ್ಯ ಮನೆತನ ತಮಿಳುನಾಡಿನ ಸಂಗಮ್ ಕಾಲದಲ್ಲಿ ಕಾಣಿಸಿಕೊಳ್ಳುತ್ತದೆ. ಆದರೆ ಪಲ್ಲವರು ಪ್ರಬಲರಾದಾಗಲೂ ಕ್ರಿ.ಶ. ೬ನೆಯ ಶತಮಾನದವರೆಗೆ ಪಾಂಡ್ಯ ಮನೆತನದ ಆಳ್ವಿಕೆಯ ಬಗ್ಗೆ ಯಾವುದೇ ಮಾಹಿತಿ ತಿಳಿದುಬಂದಿಲ್ಲ. ಮತ್ತೆ ಕಡಂಗಾನ್ ಎಂಬುದನು ಅನೇಕ ವಿರೋಧಿಗಳನ್ನು ಸದೆ ಬಡಿದು ಪಾಂಡ್ಯರಾಜ್ಯವನ್ನು ಸ್ಥಾಪಿಸಿದನು. ಇವರು ಪಲ್ಲವ, ಚೇರ, ಚೋಳರೊಡನೆ ನಿರಂತರವಾಗಿ ಯುದ್ಧ ಮಾಡಬೇಕಾಯಿತು. ಪಾಂಡ್ಯ ಮನೆತನ ಕ್ರಿ.ಶ ೧೩೦೮ರವರೆಗೆ ಅಸ್ತಿತ್ವದಲ್ಲಿತ್ತು.[೬೨] ಕರ್ನಾಟಕದಲ್ಲಿ ಪಾಂಡ್ಯಮನೆತನದ ಎರಡು ಶಾಖೆಗಳ ಇತಿಹಾಸ ಒಭ್ಯವಿದೆ. ಸಿಸುಗಲಿಯಿಂದ ಆಳುತ್ತಿದ್ದ 'ಸಿಸುಗಲಿ ಪಾಂಡ್ಯ'ರು ಹಾಗೂ ಉಚ್ಚಂಗಿದುರ್ಗದಿಂದ ಆಳುತ್ತಿದ್ದ 'ಉಚ್ಚಂಗಿ ಪಾಂಡ್ಯರು' ನೊಳಂಬವಾಡಿ-೩೨೦೦೦ವನ್ನು ಕ್ರಿ.ಶ. ೧೦೭೬ ರಿಂದ ೧೨ನೆ ಶತಮಾನದ ಅಂತ್ಯದವರೆಗೂ ಆಳಿದ್ದಾರೆ[೬೩]

ಉಚ್ಚಂಗಿ ಪಾಂಡ್ಯರು ಕಲ್ಯಾಣದ ಚಾಲುಕ್ಯ ಚಕ್ರವರ್ತಿಗಳಿಗೆ ನಿಷ್ಠೆಯಿಂದ ಇದ್ದ ಮಹಾಮಂಡಳೇಶ್ವರರಾಗಿದ್ದರು. ಅನೇಕ ಯುದ್ಧಗಳಲ್ಲಿ ಭಾಗವಹಿಸಿ ತಮ್ಮ ಚಕ್ರವರ್ತಿಗೆ ಜಯ ತಂದಿದ್ದಾರೆ. ಚೋಳರೊಂದಿಗೆ ನಡೆದ ಯುದ್ಧಗಳಲ್ಲಿ ಇವರು ನೇರವಾಗಿ ಭಾಗವಹಿಸಿ ಜಯ ತಂದುಕೊಟ್ಟಿದ್ದಾರೆ. ಈ ವಂಶದ ತ್ರಿಭುವನಮಲ್ಲ ರಾಯಪಾಂಡ್ಯ ಮತ್ತು ತ್ರಿಭುವನಮಲ್ಲ ಪಾಂಡ್ಯದೇವರು 'ರಾಜಿಗಚೋಳ ಮನೋಭಂಗ'ವೆಂಬ ಬಿರುದನ್ನು ಧರಿಸಿದ್ದಾರೆ. ಆರನೆಯ ವಿಕ್ರಮಾದಿತ್ಯನಿಗೆ ಅನ್ಯೋನ್ಯವಾಗಿದ್ದ ಕಾರಣ ಚಕ್ರವರ್ತಿಯ 'ತ್ರಿಭುವನಮಲ್ಲ' ಎಂಬ ಬಿರುದನ್ನು ಈ ವಂಶದ ಕೆಲವು ಅರಸರು ಧರಿಸಿದ್ದಾರೆ.

ಪ್ರಸ್ತುತ ಅಧ್ಯಯನದಲ್ಲಿ ಕ್ರಿ.ಶ. ೧೦೮೩ರ ಅಂಬಳಿ[೬೪] ಶಾಸನದಲ್ಲಿ ಕಲ್ಯಾಣ ಚಾಲುಕ್ಯ ಆರನೆಯ ವಿಕ್ರಮಾದಿತ್ಯದ ಮಹಾಮಂಡಳೇಶ್ವರನಾಗಿ ತ್ರಿಭುವನಮಲ್ಲ ಪಾಂಡ್ಯದೇವನು ನೊಳಂಬವಾಡಿ-೩೨೦೦೦ವನ್ನಾಳುತ್ತಿದ್ದ ಸಮಯದಲ್ಲಿ ಅಮ್ಮೆಳೆಯಲ್ಲಿ ಕಲಿದೇವರ ದೇವಾಲಯವನ್ನು ಕಟ್ಟಿಸಿದ್ದನ್ನು ತಿಳಿಸುತ್ತದೆ. ಕ್ರಿ.ಶ. ೧೧೧೧ರ ಹನಸಿ[೬೫] ಶಾಸನದಲ್ಲಿ ಕಲ್ಯಾಣ ಚಾಲುಕ್ಯ ಮನೆತನದ ತ್ರಿಭುವನಮಲ್ಲದೇವನ ಮಹಾಮಂಡಳೇಶ್ವರನಾಗಿ ತ್ರಿಭುವನಮಲ್ಲ ಪಾಂಡ್ಯದೇವನು ನೊಳಂಬವಾಡಿ-೩೨೦೦೦ವನ್ನಾಳುತ್ತಿದ್ದ ಸಮಯದಲ್ಲಿ ಮಹಾಸಾಮಂತ ಹೊಳ್ಳೆಯನು ಕೋಗಳಿ-೫೦೦ರ ಒಳಗೆ ಹನಸೆಯ ಪರಮೇಶ್ವರ ದೇವಾಲಯಕ್ಕೆ ಬಿಟ್ಟ

ದಾನದತ್ತಿಯನ್ನು ತಿಳಿಸುತ್ತದೆ. ಕ್ರಿ.ಶ. ೧೧೧೨ರ ಕೊಟ್ಟೂರು[೬] ಶಾಸನದಲ್ಲಿ ಕಲ್ಯಾಣ ಚಾಲುಕ್ಯ ಮನೆತನದ ತ್ರಿಭುವನಮಲ್ಲದೇವನ ಮಹಾಮಂಡಳೇಶ್ವರನಾಗಿ ತ್ರಿಭುವನಮಲ್ಲ ಪಾಂಡ್ಯದೇವನು ನೊಳಂಬವಾಡಿ-೩೨೦೦೦ವನ್ನಾಳುತ್ತಿದ್ದ ಕದಂಬ ವಂಶದ ಮಹಾಮಂಡಳೇಶ್ವರ ಘಟ್ಟಿಯರಸನು ಕೊಟ್ಟೂರಿನ ಮೂಲಸ್ಥಾನ ರಾಮೇಶ್ವರ ದೇವಾಲಯಕ್ಕೆ ನೀಡಿದ ದಾನವನ್ನು ಉಲ್ಲೇಖಿಸುತ್ತದೆ. ಕ್ರಿ.ಶ. ೧೧೪೩ರ ಅಂಬಳಿ[೭] ಶಾಸನದಲ್ಲಿ ಕಲ್ಯಾಣ ಚಾಲುಕ್ಯ ಎರಡನೆಯ ಜಗದೇಕಮಲ್ಲನ ಮಹಾಮಂಡಳೇಶ್ವರನಾಗಿ ಜಗದೇಕ ವೀರಪಾಂಡ್ಯನು ನೊಳಂಬವಾಡಿ-೩೨೦೦೦ವನ್ನಾಳುತ್ತಿದ್ದ ಸಮಯದಲ್ಲಿ ಕದಂಬ ವಂಶದ ಘಟ್ಟಿದೇವನ ಮಗ ಚಿಬಿದೇವರಸನು ಅಮ್ಮೆಳೆಯಲ್ಲಿ ಜ್ಞಾನಪ್ರಕಾಶಭಟ್ಟಾರಕದೇವನು ಪ್ರತಿಷ್ಠಾಪಿಸಿದ ನರಸಿಂಹದೇವರ ಸೇವೆಗೆ ನೀಡಿದ ಭೂದಾನವನ್ನು ತಿಳಿಸುತ್ತದೆ. ಕ್ರಿ.ಶ ೧೧೪೪ರ ಉಲುವತ್ತಿ[೮] ಶಾಸನದಲ್ಲಿ ಕಲ್ಯಾಣ ಚಾಲುಕ್ಯ ಮನೆತನದ ಎರಡನೆಯ ಜಗದೇಕಮಲ್ಲ ಮಹಾಮಂಡಳೇಶ್ವರನಾಗಿ ಜಗದೇಕಮಲ್ಲ ವೀರಪಾಂಡ್ಯದೇವನು ನೊಳಂಬವಾಡಿ-೩೨೦೦೦ವನ್ನಾಳುತ್ತಿದ್ದ ಕದಂಬ ವಂಶದ ಮಾಚಿದೇವನು ಕೋಗಳಿ-೫೦೦ನ್ನು ಆಳುತ್ತಿದ್ದಾಗ ಉಯ್ಯಲ್ವತ್ತಿಯ ನಾಳ್ಪ್ರಭು ಸಿಂಗಗಾವುಂಡನ ಮಗ ಅಜ್ಜಗಾವುಂಡ ತನ್ನ ತಂದೆ ತಾಯಿಗೆ ಪುಣ್ಯವಾಗಲೆಂದು ದಾನನೀಡಿದ್ದನ್ನು ತಿಳಿಸುತ್ತದೆ. ಕ್ರಿ.ಶ. ೧೧೪೭ರ ಅಲಬೂರು[೯] ಶಾಸನದಲ್ಲಿ ಕಲ್ಯಾಣ ಚಾಲುಕ್ಯ ಎರಡನೆಯ ಜಗದೇಕಮಲ್ಲನ ಮಹಾಮಂಡಳೇಶ್ವರನಾಗಿ ಜಗದೇಕ ವೀರಪಾಂಡ್ಯದೇವನು ನೊಳಂಬವಾಡಿ-೩೨೦೦೦ವನ್ನು ಮತ್ತು ನಾಚಿದೇವರಸನು ಕೋಗಳಿ-೫೦೦ನ್ನು ಆಳುತ್ತಿದ್ದನು ತಿಳಿಸುತ್ತದೆ. ಈ ನಿಟ್ಟಿನಲ್ಲಿ ಪ್ರಸ್ತುತ ಅಧ್ಯಯನ ಪ್ರದೇಶವು ಪಾಂಡ್ಯರ ಆಳ್ವಿಕೆಗೆ ಒಳಪಟ್ಟಿತ್ತೆಂದು ಸ್ಪಷ್ಟವಾಗಿ ಹೇಳಬಹುದು.

**ಸೇವುಣರು**

ಕ್ರಿ.ಶ. ಸು. ೮೩೫ ರಿಂದ ೧೩೧೩ರವರೆಗೆ ಆಳಿದ ಕರ್ನಾಟಕದ ಸೇವುಣರು ವಿಶೇಷವಾಗಿ ದೇವಗಿರಿಯ ಯಾದವರೆಂದು ಭಾರತದ ಇತಿಹಾಸದಲ್ಲಿ ಪ್ರಸಿದ್ಧರಾಗಿದ್ದಾರೆ. ಮಹಮ್ಮದೀಯ ಚರಿತ್ರೆಕಾರರಾದ ಅಮೀರ್ ಖುಸ್ರು, ಪೆರಿಸ್ತಾ, ಬರಾನಿ ಮುಂತಾದವರು ಸೇವುಣರನ್ನು ಯಾದವರೆಂದೇ ಕರೆದಿದ್ದಾರೆ. ಇದನ್ನೇ ಅನುಸರಿಸಿದ ಫ್ಲೀಟ್ ತಮ್ಮ 'ಡೈನಾಸ್ಟಿಕ್ ಆಫ್ ಕೆನಾರಿಸ್ ಡಿಸ್ಟ್ರಿಕ್ ಆಫ್ ಬಾಂಬೆ ಪ್ರೆಸಿಡೆನ್ಸಿ' ಎಂಬ ಗ್ರಂಥದಲ್ಲಿ ಸೇವುಣರನ್ನು ದೇವಗಿರಿಯ ಯಾದವರೆಂದೇ ಕರೆದಿದ್ದಾರೆ. ತದನಂತರದ ಚರಿತ್ರೆಕಾರರು ಇದನ್ನೇ ಅನುಸರಿಸುತ್ತಾ ಬಂದಿದ್ದಾರೆ.[೨೦] ಇವರು ಈಗ ಮಹಾರಾಷ್ಟ್ರದಲ್ಲಿರುವ 'ದೇವಗಿರಿ'ಯನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡು ಆಳುತ್ತಿದ್ದರು. ಆರಂಭದಲ್ಲಿ ಕಲ್ಯಾಣ ಚಾಲುಕ್ಯ ಚಕ್ರವರ್ತಿಗಳಿಗೆ ಮಹಾಮಂಡಳೇಶ್ವರರಾಗಿದ್ದರು. ಕಲಚೂರಿ ವಂಶದವರ ಆಳ್ವಿಕೆಯಲ್ಲಿ ಸ್ವಾತಂತ್ರ್ಯವನ್ನು ಘೋಷಿಸಿಕೊಂಡ ಇವರು ರಾಜ್ಯ ವಿಸ್ತರಣೆಗಾಗಿ ಹೊಯ್ಸಳರ ಜೊತೆ ಪೈಪೋಟಿಗೆ ಇಳಿದರು. ಇವರಿಬ್ಬರ ಪೈಪೋಟಿಯಲ್ಲಿ ದಕ್ಷಿಣ ಭಾಗದ ಪ್ರದೇಶವನ್ನು ಹೊಯ್ಸಳರು ಉತ್ತರ ಭಾಗದ ಪ್ರದೇಶವನ್ನು ಸೇವುಣರು ಆಕ್ರಮಿಸಿಕೊಂಡಿರುವುದು ಶಾಸನಗಳಿಂದ ವ್ಯಕ್ತವಾಗುತ್ತದೆ.[೨೧]

ಕ್ರಿ.ಶ.೧೨೫೮ರ ಏಣಗಿ[೨೨] ಶಾಸನದಲ್ಲಿ ಯಾದವ ಮನೆತನದ ಸೇವುಣರಾಯ ಕಂಧಾರದೇವನ ಕಾಲದಲ್ಲಿ ಪೂವಿನಪಡಂಗಿಲೆಯ ೧೨೦ ಮಹಾಜನರು ಕುಸುಮನಾಥ ದೇವರಿಗೆ ಭೂಮಿಯನ್ನು ದಾನ ನೀಡಿದ್ದನ್ನು ದಾಖಲಿಸುತ್ತದೆ. ಪೂವಿನ ಪಡಂಗಿಲೆಯು ಕುಂತಳ

ದೇಶದ ನೊಳಂಬವಾಡಿ ನಾಡಿನ ಕೋಗಳಿನಾಡಿನಲ್ಲಿತ್ತೆಂದು ತಿಳಿಸುತ್ತದೆ. ಕ್ರಿ.ಶ. ೧೨೬೫ರ ಚಿಮ್ಮಹಳ್ಳಿ[೨೩] ಶಾಸನದಲ್ಲಿ ಯಾದವ ಮನೆತನದ ವೀರ ಮಹಾದೇವ ಅರಸನ ಅಧೀನ ಅಧಿಕಾರಿ ಸೋಯಿದೇವರಸನು ಮಧುರದೇವರಚಾರ್ಯ ರಾಜಗುರುವಿಗೆ ನೆಲ್ಕುದುರೆ ಗ್ರಾಮವನ್ನು ದಾನವಾಗಿ ಕೊಟ್ಟನೆಂದು ತಿಳಿಸುತ್ತದೆ. ಕ್ರಿ.ಶ. ೧೨೬೮ರ ಉಜ್ಜಿನಿ[೨೪] ಶಾಸನದಲ್ಲಿ ಯಾದವ ಮನೆತನದ ಮಹಾದೇವರಾಯನ ಮಹಾಪ್ರಧಾನ ಸರ್ವಾಧಿಕಾರಿ ತಿಪ್ಪರಸನ ಅಳಿಯ ಚಾವುಂಡರಸನು ಪಾಂಡ್ಯ-ನಾಡಿನ ಸರ್ವಾಧಿಕಾರಿಯಾಗಿದ್ದನು ಮತ್ತು ಆತನ ಕೆಳಗೆ ಸುಂಕದ ಚವುಡರಸನು ಸುಂಕಾಧಿಕಾರಿಯಾಗಿದ್ದನ್ನು ತಿಳಿಸುತ್ತದೆ.

**ಹೊಯ್ಸಳರು**

ಕಲ್ಯಾಣ ಚಾಲುಕ್ಯರ ಆಳ್ವಿಕೆಯ ಕಾಲದಲ್ಲಿ ಸೇವುಣರಂತೆ ಹೊಯ್ಸಳರೂ ಅವರ ಮಾಂಡಳೀಕರಾಗಿ ಕೆಲವು ಭಾಗಗಳ ಆಡಳಿತ ನೋಡಿಕೊಳ್ಳುತ್ತಿದ್ದರು. ಇವರು ತಮ್ಮನ್ನು ಯಾದವ ವಂಶಕ್ಕೆ ಸೇರಿದವರೆಂದು ಹೇಳಿಕೊಂಡಿದ್ದಾರೆ. ಶಾಸನಗಳಲ್ಲಿ ತಮ್ಮನ್ನು 'ಯಾದವ ನಾರಾಯಣ' 'ಯಾದವಕುಲಾಂಬರದ್ಯುಮಣಿ' 'ದ್ವಾರಾವತಿ ಪುರವಾಧೀಶ್ವರ' ಮುಂತಾದ ಬಿರುದುಗಳಿಂದ ಗುರುತಿಸಿಕೊಂಡಿದ್ದಾರೆ.

ಗಂಗವಾಡಿ ಗೆಲುವಿನಿಂದ ಪ್ರಚೋದಿತನಾದ ವಿಷ್ಣುವರ್ಧನ ಚಾಲುಕ್ಯರಿಂದ ಸ್ವತಂತ್ರನಾಗಲು ಹವಣಿಸಿದ. ಚಾಲುಕ್ಯ ಸಾಮ್ರಾಟ ಆರನೆಯ ವಿಕ್ರಮಾದಿತ್ಯ ವೃದ್ಧನಾಗಿದ್ದು, ಶಾಂತಿಯುತ ಆಳ್ವಿಕೆಯಲ್ಲಿದ್ದುದರಿಂದ ವಿಷ್ಣುವರ್ಧನನಿಗೆ ಮುಂದುವರಿಯಲು ಅವಕಾಶ ಪ್ರಾಪ್ತವಾಯಿತು. ಚಾಲುಕ್ಯ ಅರಸ ಸೋಮೇಶ್ವರನ ಕಾಲದಲ್ಲಿ ಕಲಚೂರಿಗಳು ಸಾಮ್ರಾಜ್ಯದಾಹದಲ್ಲಿ ತೊಡಗಿದ್ದರು. ಇವರಿಬ್ಬರ ಮಧ್ಯದ ಕಾದಾಟದಲ್ಲಿ ಪ್ರಚೋದಿತನಾದ ವಿಷ್ಣುವರ್ಧನ ಕ್ರಿ.ಶ ೧೧೩೬ರಲ್ಲಿ ಕದಂಬರನ್ನು ಸೋಲಿಸಿ, ಅದರ ಭದ್ರಕೋಟೆಗಳೆನಿಸಿದ ಹಾನಗಲ್ಲು, ಬಂಕಾಪುರಗಳನ್ನು ವಶಪಡಿಸಿಕೊಂಡನು. ಬಂಕಾಪುರ ಅವನ ಉಪ ರಾಜಧಾನಿಯಾಯಿತು. ಕ್ರಿ.ಶ. ೧೧೪೨ ರಲ್ಲಿ ವಿಷ್ಣುವರ್ಧನನ ಮಗ ಒಂದನೆಯ ನರಸಿಂಹ ಅಧಿಕಾರವಹಿಸಿಕೊಂಡನು. ಇವನು ಬಲಿಷ್ಠ ದೊರೆಯಾಗಿರಲಿಲ್ಲ. ನಿರಂತರ ಪತನಗಳಿಂದ ಬೇಸತ್ತ ಇವನ ಮಗ ಎರಡನೆಯ ಬಲ್ಲಾಳ ಅನ್ಯಮಾರ್ಗವಿಲ್ಲದೆ ತಂದೆಯನ್ನು ಪದಚ್ಯುತಗೊಳಿಸಿ ಅಧಿಕಾರ ಸೂತ್ರಗಳನ್ನು ಹಿಡಿದುಕೊಂಡ. ಕ್ರಿ.ಶ. ೧೨೨೦ರವರೆಗೂ ಸ್ವತಂತ್ರ ಆಳ್ವಿಕೆ ಮಾಡಿದನು. ಈ ಸ್ವತಂತ್ರ ರಾಜ್ಯವನ್ನಾಗಿ ರೂಪಿಸಬೇಕೆಂದಿದ್ದ ವಿಷ್ಣುವರ್ಧನನ ಕನಸು ನನಸಾದದ್ದು ಎರಡನೆಯ ಬಲ್ಲಾಳನಿಂದ. ಅವನು ಚೆಂಗಾಳ್ವ, ಕೊಂಗಾಳ್ವರನ್ನು ಸೋಲಿಸಿದ. ಅಲ್ಲದೆ ಉಚ್ಚಂಗಿ ಪಾಂಡ್ಯರನ್ನು ಸೋಲಿಸಿದರೂ, ಅವರ ರಾಜ್ಯವನ್ನು ಹಿಂದಿರುಗಿಸಿ ಸಾಮಂತರನ್ನಾಗಿ ಮಾಡಿಕೊಂಡ[೨೫]

ಕ್ರಿ.ಶ. ೧೧೯೪ ರ ಉಜ್ಜಿನಿ[೨೬] ಶಾಸನದಲ್ಲಿ ಹೊಯ್ಸಳ ಮನೆತನದ ವೀರನರಸಿಂಹನ ಕಾಲದಲ್ಲಿ ಅಲ್ಲಿಯ ಕಲಿದೇವರಿಗೆ ಕೋಗಳಿಯಲ್ಲಿ ೪೦೦ ಕಂಬ ಭೂಮಿಯನ್ನು ದಾನ ನೀಡಿದ್ದನ್ನು ತಿಳಿಸುತ್ತದೆ. ಕ್ರಿ.ಶ. ೧೨೨೧ರ ಕೊಟ್ಟೂರು[೨೭] ಶಾಸನದಲ್ಲಿ ಪ್ರತಾಪ ಚಕ್ರವರ್ತಿ ಎರಡನೆಯ ವೀರನರಸಿಂಹನ ಆಡಳಿತದಲ್ಲಿ ಅವನ ದಂಡನಾಯಕನಾದ ಕೇಶವದಂಡಾಧಿಪತಿಯು ಮಾವಿನಮಾಗೆ ಗ್ರಾಮವನ್ನು ದಾನ ನೀಡಿದ್ದನ್ನು ತಿಳಿಸುತ್ತದೆ. ಕ್ರಿ.ಶ. ೧೨೨೩ರ ಕೋಗಳಿ[೨೮] ಶಾಸನದಲ್ಲಿ ನರಸಿಂಹದೇವನನನ್ನು ದ್ವಾರಾವತಿ ಪುರವರಾಧೀಶ್ವರ.

ಯಾದವ ಕುಳಾಂಬರ, ಸಮ್ಯಕ್ತ ಚೂಡಾಮಣಿ, ಮಲೆರಾಜರಾಜ, ಮಲೆಪರೊಳ್ಗಂಡ, ಕದನ ಪ್ರಚಂಡ, ಶನಿವಾರಸಿದ್ಧಿ, ಗಿರಿದುರ್ಗಮಲ್ಲ ಎಂಬ ಬಿರುದುಗಳಿಂದ ಕೊಂಡಾಡಿದೆ. ಕ್ರಿ.ಶ. ೧೨೨೬ರ ಬೆಣ್ಣೆಕಲು[೭೯] ಶಾಸನದಲ್ಲಿ ಹೊಯ್ಸಳ ವಂಶದ ಸ್ತುತಿ ಇದೆ ಮತ್ತು ಇದರ ಕುಲವು ಸಳನಿಂದ ಮುಂದುವರಿದು ಬಂದುದನ್ನು ತಿಳಿಸುತ್ತದೆ. ಕ್ರಿ.ಶ. ೧೨೭೬ರ ಕೋಗಳಿ[೮೦] ಶಾಸನದಲ್ಲಿ ಹೊಯ್ಸಳ ಮನೆತನದ ರಾಮನಾಥದೇವನ ಕಾಲದಲ್ಲಿ ತೀರ್ಥವೆಂದು ಕರೆಯಲ್ಪಡುತ್ತಿದ್ದ ಕೋಗಳಿಯ ಚೆನ್ನ-ಪಾರ್ಶ್ವದೇವರ ಪ್ರತಿದಿನದ ಅಭಿಷೇಕಕ್ಕೆ ೭೭ ಜೈನ ಶ್ರಾವಕರು, ಭಕ್ತರು ಮತ್ತು ದಾನಿಗಳು ಹಣವನ್ನು ದಾನ ಮಾಡಿದ್ದನು ತಿಳಿಸುತ್ತದೆ.

**ವಿಜಯನಗರದ ಅರಸರು**

ಮಧ್ಯಕಾಲಿನ ದಕ್ಷಿಣ ಭಾರತದ ಚರಿತ್ರೆಯಲ್ಲಿ ವಿಜಯನಗರ ಸಾಮ್ರಾಜ್ಯದ ಸ್ಥಾಪನೆ ಹಾಗೂ ಆಳ್ವಿಕೆ ಅತ್ಯಂತ ಮಹತ್ವಪೂರ್ಣವಾದ ಘಟನೆ. ಇದನ್ನು ಮರೆತುಹೋದ ಹಾಗೂ ಎಂದೆಂದೂ ಮರೆಯಲಾಗದ ಮಹಾಸಾಮ್ರಾಜ್ಯ ಎಂದು ಇತಿಹಾಸಕಾರರು ಕರೆದಿದ್ದಾರೆ.

ಈ ಭಾಗದ ಮೇಲೆ ವಿಜಯನಗರ ಅರಸರು ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ತಮ್ಮ ಆಡಳಿತ ನಡೆಸಿದ್ದಾರೆ. ಅವರ ಅನೇಕ ಶಾಸನಗಳು ಮತ್ತು ದೇವಾಲಯಗಳು ಈ ಪ್ರದೇಶದಲ್ಲಿ ದೊರೆತಿದ್ದು ಅವುಗಳ ಸಹಾಯದಿಂದ ವಿಜಯನಗರ ಅರಸರು ಈ ಪ್ರದೇಶದ ಮೇಲೆ ಹೊಂದಿದ್ದ ಆಡಳಿತಾತ್ಮಕ ಸಂಬಂಧಗಳನ್ನು ತಿಳಿಯಬಹುದು. ವಿಜಯನಗರ ಅರಸರು ಈ ಪ್ರದೇಶವನ್ನು ತಮ್ಮ ಆಡಳಿತದ ಅನುಕೂಲಕ್ಕೋಸ್ಕರ ಅನೇಕ ಭಾಗಗಳಾಗಿ ವಿಭಾಗಿಸಿದ್ದರು. ಅವುಗಳಲ್ಲಿ ಸೀಮೆ, ವಂತೆ ಮತ್ತು ಚಾವಡಿಗಳೆಂಬ ಆಡಳಿತ ವಿಭಾಗಗಳು ಮುಖ್ಯವಾದವು. ದಾವಣಗೆರೆ ತಾಲೂಕಿನ ಆಲೂರಿನ ಶಾಸನವು ಈ ರೀತಿಯ ಆಡಳಿತ ವಿಭಾಗಗಳನ್ನು ಹೆಸರಿಸುವ ಮೊದಲ ಶಾಸನವಾಗಿದೆ. ಬುಕ್ಕರಾಯನ ಕಾಲಕ್ಕಾಗಲೇ ಈ ರೀತಿಯ ಆಡಳಿತ ವ್ಯವಸ್ಥೆಯನ್ನು ಅವರು ರೂಪಿಸಿಕೊಡಿದ್ದರು.[೮೧]

ಕ್ರಿ.ಶ. ೧೪೮೯ರ ರಾಜಬಾವನಹಳ್ಳಿ[೮೨] ಶಾಸನದಲ್ಲಿ ದೇವರಾಯ ಮಹಾರಾಜನ ಕಾಲದಲ್ಲಿ ಲಖಪನ ಮಗ ಹರಿಯಣನು ಪಾಂಡ್ಯನಾಡ ನೊಣಬನರಸಿಯ ಕೆರೆಯನ್ನು ಆಳುತ್ತಿದ್ದಾಗ ಹರಿಯಣನು ಹರಿಯ ಸಮುದ್ರ ಗ್ರಾಮವನ್ನು ಶ್ರೋತ್ರಿಯ ಅಗ್ರಹಾರವಾಗಿ ದಾನ ನೀಡಿದ್ದನ್ನು ತಿಳಿಸುತ್ತದೆ. ಕ್ರಿ.ಶ. ೧೫೧೮ರ ಆಲಬೂರು[೮೩] ಶಾಸನದಲ್ಲಿ ಕೃಷ್ಣದೇವರಾಯ ಅರಸನ ಆಪ್ತ ವ್ಯಕ್ತಿಯಾದ ಬಸವಪ ನಾಯಕನ ಮಗ ಕೃಷ್ಣಪ ನಾಯಕನು ಅಲಬೂರಿನ ಹೊನ್ನತ್ತಿದೇವಿ ದೇವಾಲಯಕ್ಕೆ ಭೂದಾನ ನೀಡಿದ್ದನ್ನು ತಿಳಿಸುತ್ತದೆ. ಕ್ರಿ.ಶ. ೧೫೨೮ರ ಮೊರಬ[೮೪], ಕ್ರಿ.ಶ. ೧೫೨೧ರ ಕೋಗಳಿ,[೮೫] ಶಾಸನಗಳಲ್ಲಿಯೂ ಸಹ ಕೃಷ್ಣದೇವರಾಯನ ಕಾಲದ ಶಾಸನಗಳಿದ್ದು, ಇವುಗಳಲ್ಲಿಯೂ ದೇವಾಲಯಗಳಿಗೆ ಭೂದಾನ ನೀಡಿದ್ದನ್ನು ತಿಳಿಸುತ್ತದೆ. ಕ್ರಿ.ಶ. ೧೫೩೯ರ ಉಜ್ಜಿನಿ[೮೬] ಶಾಸನದಲ್ಲಿ ಅಚ್ಯುತರಾಯನು ಬ್ರಾಹ್ಮಣರಿಗೆ ನೀಡಿದ ಆನಂದನಿಧಿ ದಾನವನ್ನು ತಿಳಿಸುತ್ತದೆ. ಕ್ರಿ.ಶ. ೧೫೪೩ರ ಛತ್ರದಹಳ್ಳಿ[೮೭] ಶಾಸನದಲ್ಲಿ ಸದಾಶಿವರಾಯನ ಕಾಲದಲ್ಲಿ ಛತ್ರದಹಳ್ಳಿಯ ಯೆಲವಣ್ಣನು ಬಾವಿಯನ್ನು ಕಟ್ಟಿಸಿ ಸಾಲುಮರಗಳನ್ನು ನೆಡೆಸಿದ್ದನ್ನು ತಿಳಿಸುತ್ತದೆ. ಕ್ರಿ.ಶ. ೧೫೪೪ರ ಕೆಂಚೆತಿನಹಳ್ಳಿ[೮೮] ಶಾಸನದಲ್ಲಿ ಸದಾಶಿವರಾಯನ ಕಾಲದಲ್ಲಿ ಬಯಪ್ಪನಾಯಕನ ಮಗ ಕೃಷ್ಣಪನಾಯಕನಿಗೆ ಪುಣ್ಯವಾಗಲೆಂದು ಕೆಂಚಿಸೆಟ್ಟಿಹಳ್ಳಿಯಲ್ಲಿಯ ಧರ್ಮಾಪತಕ್ಕೆ ಭೂದಾನ

ನೀಡಿದ್ದನ್ನು ತಿಳಿಸುತ್ತದೆ. ಕ್ರಿ.ಶ. ೧೫೪೪ರ ಮಗಿಮಾವಿನಹಳ್ಳಿ[೫೯] ಶಾಸನದಲ್ಲಿ ಬಯಕಾರ ರಾಮಪಯ್ಯನು ತಮ್ಮ ಮಗಳು ಲಖಿರಸಮ್ಮಳಿಗೆ ಪುಣ್ಯವಾಗಲೆಂದು ಚಿಕ್ಕಲಕ್ಕಸಮುದ್ರದ ಕೆರೆಯನ್ನು ಕಟ್ಟಿಸಿದ ವಿವರವಿದೆ. ಕ್ರಿ.ಶ. ೧೫೪೮ರ ಕೊಟ್ಟೂರು[೬೦] ಶಾಸನದಲ್ಲಿ ಸದಾಶಿವರಾಯನ ಮಹಾಮಂಡಳೇಶ್ವರ ರಾಮರಾಜನು ಕೊಟ್ಟೂರು ಸೀಮೆಯ ನಾವಿದರಿಗೆ ತೆರಿಗೆ ವಿನಾಯಿತಿ ಮಾಡಿದ್ದನ್ನು ತಿಳಿಸುತ್ತದೆ. ಕ್ರಿ.ಶ. ೧೫೫೨ರ ದೇವಲಾಪುರ[೬೧] ಮತ್ತು ಕ್ರಿ.ಶ. ೧೫೫೬ರ ಹುಲಿಗುಂಟೆ[೬೨] ಶಾಸನಗಳಲ್ಲಿ ಬಯಕಾರ ರಾಮಪ್ಪನ್ನು ದಾನ ನೀಡಿದ್ದನು ತಿಳಿಸುತ್ತದೆ.

**ಪಾಳೆಯಗಾರರು**

ವಿಜಯನಗರ ಸಾಮ್ರಾಜ್ಯ ತುಂಬಾ ವಿಸ್ತಾರವಾಗಿದ್ದರಿಂದ ಎಲ್ಲಾ ಭಾಗಗಳ ಮೇಲೆ ತಾವೇ ನೇರವಾಗಿ ಆಳ್ವಿಕೆ ನಡೆಸುವುದು ತೊಂದರೆಯಾಗುತ್ತಿತ್ತು. ಹೀಗಾಗಿ ಆಡಳಿತದ ಉಸ್ತುವಾರಿ ನೋಡಿಕೊಳ್ಳಲು, ಕಂದಾಯ ವಸೂಲಿ ಮಾಡಲು ಮತ್ತು ಶಾಂತಿ ಸುವ್ಯವಸ್ಥೆಗಳನ್ನು ನೋಡಿಕೊಳ್ಳಲು, ಯುದ್ಧ ಸಂದರ್ಭದಲ್ಲಿ ಸಹಾಯ ಮಾಡುವುದು ಮೊದಲಾದ ಗುರಿ-ಉದ್ದೇಶಗಳಿಗಾಗಿ ಬಲಿಷ್ಠ ಹಾಗೂ ಅತೀ ಪ್ರಭಾವವುಳ್ಳ ಅಧಿಕಾರಿಗಳನ್ನು ನೇಮಿಸುತ್ತಿದ್ದರು. ಬರ್ಟನ ಸ್ಟೈನ್ ವಿಜಯನಗರ ಸಾಮ್ರಾಜ್ಯವು ಸಣ್ಣ-ಸಣ್ಣ ಸಂಸ್ಥಾನ, ರಾಜ್ಯಗಳಲ್ಲಿ ವಿಭಾಗಗೊಂಡಿದ್ದು, ಅವುಗಳ ಮೇಲೆ ಇವರು ಪ್ರಭುತ್ವ ಹೊಂದಿದ್ದರೆಂದು ಸೆಗ್ಮೆಂಟರಿ ಸ್ಟೇಟ್' ಸಿದ್ಧಾಂತವನ್ನು ಮಂಡಿಸಿದ್ದಾರೆ. ಇಂತಹ ಅಧೀನರಾದ ಸಾಮಂತರು, ಸೈನಿಕರು, ದಂಡನಾಯಕರು, ನಾಯಕರು ವಿಜಯನಗರ ಅವನತಿ ನಂತರ ಕ್ರಮೇಣ ಸ್ವತಂತ್ರವಾಗಿ ಆಳ್ವಿಕೆ ನಡೆಸಲು ಮುಂದೆ ಬಂದು ಪಾಳೆಯಗಾರರೆನಿಸಿಕೊಂಡರು. ವಿಜಯನಗರ ಸಾಮ್ರಾಜ್ಯದ ಪತನದ ತರುವಾಯ ರಾಜ್ಯಾಡಳಿತದಲ್ಲಿ ಬಹುಖ್ಯಾತಿ ಪಡೆದವರು ಪಾಳೆಯಗಾರರು. ಅವರುಗಳೆಂದರೆ: ಗುಡೇಕೋಟೆ, ಜರಿಮಲೆ, ಹರಪನಹಳ್ಳಿ, ರಾಯದುರ್ಗ, ಚಿತ್ರದುರ್ಗ, ಬಸವಾಪಟ್ಟಣ, ಸಂತೇಬೆನ್ನೂರು, ನಾಯಕನಹಟ್ಟಿ, ಹರತಿಕೋಟೆ, ಮತ್ತೋಡು, ತರೀಕೆರೆ ಮೊದಲಾದವುಗಳನ್ನು ಹೆಸರಿಸಬಹುದು. ಹೀಗೆ ೭೭ ಪಾಳೆಯ ಪಟ್ಟುಗಳು, ೯೯ ಸಂಸ್ಥಾನಗಳು ಬೇಡನಾಯಕರ ಅಧೀನದಲ್ಲಿದ್ದವೆಂದು ಹೇಳಲಾಗುತ್ತದೆ.[೬೩]

ಪ್ರಸ್ತುತ ಅಧ್ಯಯನ ಪ್ರದೇಶವಾದ ಅಂಬಳಿ ಗ್ರಾಮವು ಈ ಕೆಳಗಿನ ಪಾಳೆಯಗಾರರ ಆಳ್ವಿಕೆಗೆ ಒಳಪಟ್ಟಿತ್ತು.

**ಹರಪನಹಳ್ಳಿ ಪಾಳೆಯಗಾರರು**

ಹರಪನಹಳ್ಳಿ ಹಿಂದೆ ಬಳ್ಳಾರಿ ಜಿಲ್ಲೆಯ ಒಂದು ತಾಲೂಕು ಕೇಂದ್ರವಾಗಿತ್ತು. ನಂತರ ದಾವಣಗೆರೆ ಜಿಲ್ಲೆಗೆ ಸೇರಿತ್ತು. ಆದರೆ ಹೈದರಾಬಾದ ಕರ್ನಾಟಕ ೩೭೧(ಜೆ) ಕಾಯ್ದೆಗೆ ಬಳ್ಳಾರಿ ಜಿಲ್ಲೆಯು ಒಳಪಟ್ಟಿದರಿಂದ ಇಂದು ಮತ್ತೆ ಹರಪನಹಳ್ಳಿ ಬಳ್ಳಾರಿ ಜಿಲ್ಲೆಯ ತಾಲೂಕು ಕೇಂದ್ರವಾಗಿ ಮರುಸೇರ್ಪಡೆ ಮಾಡಿಕೊಳ್ಳಲಾಗಿದೆ. ಇಲ್ಲಿ ಪಾಳೆಗಾರರು ಆಳ್ವಿಕೆ ನಡೆಸಿದ ಪ್ರಸಿದ್ಧ ರಾಜಧಾನಿ ಕೇಂದ್ರವು ಇದಾಗಿತ್ತು. ಇಲ್ಲಿ ಕೋಟೆ, ಕೆರೆ, ಬಾವಿಗಳ ನಿರ್ಮಾಣ ಇವರ ಕಾಲದಲ್ಲಾಗಿವೆ. ಕ್ರಿ.ಶ. ೧೫೬೫ರಲ್ಲಿ ವಿಜಯನಗರ ಸಾಮ್ರಾಜ್ಯವು ತಾಳಿಕೋಟೆ ಕದನದಲ್ಲಿ ಪರಾಭವಗೊಂಡಾಗ ಈ ಪಾಳೆಯಗಾರರು ಆಳ್ವಿಕೆಗೆ ಬರುತ್ತಾರೆ. ೧೭ನೇ ಶತಮಾನದ

ಕೊನೆಯವರೆಗೆ ೪೬೦ ಹಳ್ಳಿಗಳಿಂದ ೮ ಲಕ್ಷ ಪೊಗದಿಯನ್ನು ಅಧೀನ ಅರಸರಿಗೆ ಕೊಡಬೇಕಾಗಿತ್ತು. ಹೈದರ್-ಟಿಪ್ಪು ಸುಲ್ತಾನರು ಹರಪನಹಳ್ಳಿಯವರ ಸಾಮರ್ಥ್ಯವನ್ನು ಅರಿತಿದ್ದರು. ಟಿಪ್ಪುವಿನ ನಂತರ ಹರಪನಹಳ್ಳಿಯ ಮಾಜಿ ದಿವಾನರು ಆಕ್ರಮಿಸಿಕೊಳುತ್ತಾರೆ. ಇದು ಹರಪನಹಳ್ಳಿ ಪಾಳೆಯಗಾರರ ಪರವಾಗಿ ಜನರಲ್ ಹ್ಯಾರಿಸ್ ಹರಪನಹಳ್ಳಿ ಸಂಸ್ಥಾನಕ್ಕೆ ಬಂದು ಶಾಂತಿಯುತವಾಗಿ ಪಾಳೆಯಗಾರರಿಗೆ ಕೊಡಬೇಕಾದ ಬಿರುದು ಹಕ್ಕುಗಳನ್ನು ಕೊಟ್ಟನು.[೪]

ಕ್ರಿ.ಶ. ೧೫೬೫ರಲ್ಲಿ ವಿಜಯನಗರ ಸಾಮ್ರಾಜ್ಯವು ರಕ್ಕಸಿ-ತಂಗಡಗಿ ಯುದ್ಧದಲ್ಲಿ ಪತನವಾಯಿತು. ಇದರಲ್ಲಿ ಭಾಗವಹಿಸಿದ ದಳವಾಯಿ, ದಂಡನಾಯಕ, ತಳವಾರರು ಸ್ವತಂತ್ರ ಪಾಳೆಯಪಟ್ಟುಗಳನ್ನು ಕಟ್ಟಿಕೊಂಡರು. ದಾದಯ್ಯನಾಯಕನೆಂಬವನು (ಮಾಚೇನಾಯಕ ಅಥವಾ ಮುದ್ದಾನಾಯಕ ತಂದೆ) ಹರಪನಹಳ್ಳಿ ಪಾಳೆಯಪಟ್ಟನ್ನು ಸ್ಥಾಪಿಸಿದನು. ಇವನು ಕಣ್ಣಪ್ಪನ ಕುಲಕ್ಕೆ ಸೇರಿದವನು ಮತ್ತು ಕುಮ್ಮಟದುರ್ಗದ ಕುಮಾರ ರಾಮನ ವಂಶಜನು. ನಾಯಕ ರಾಯಚೂರಿನ ಸಮೀಪ ಶ್ರೀ ಚಂದ್ರಲಾಪರಮೇಶ್ವರಿ ಆಶೀರ್ವಾದ ಪಡೆದು ಹರಪನಹಳ್ಳಿಗೆ ಬಂದು ರಾಜ್ಯಸ್ಥಾಪಿಸಿದನು. ದಿನಕಳೆದಂತೆ ದಾದಯ್ಯನಾಯಕ ಪ್ರಬಲ ಅರಸನಾಗುತ್ತಾನೆ. ಒಮ್ಮೆ ಬಸವಾಪಟ್ಟಣದ ಕೆಂಗಣ್ಣನಾಯಕ ಚಿತ್ರದುರ್ಗವನ್ನು ಮುತ್ತಿಗೆ ಹಾಕಿದಾಗ ಚಿತ್ರದುರ್ಗದ ಅರಸ ಮತ್ತಿ ತಿಮ್ಮಣ್ಣನಾಯಕ (೧೫೭೨) ತನ್ನ ನೆರೆಹೊರೆಯ ಅರಸರನ್ನು ಸಹಾಯಕ್ಕೆ ಕರೆಯಲು ಯೋಚಿಸುತ್ತಾನೆ. ಅದರಂತೆ ಹರಪನಹಳ್ಳಿಯ ದಾದಯ್ಯನಾಯಕನನ್ನು ಆಹ್ವಾನಿಸಿ ಯುದ್ಧದಲ್ಲಿ ಪಾಲ್ಗೊಳ್ಳಲು ಸೂಚಿಸಿದ. ದಾದಯ್ಯ ಮತ್ತು ಸಂಗಡಿಗರು ಕೆಂಗಣ್ಣನಾಯಕನನ್ನು ಹಿಮ್ಮೆಟ್ಟಿಸಿದರು. ಈ ಸವಿನೆನಪಿಗಾಗಿ ಹೊನ್ನವ್ವನಾಗತಿಯನ್ನು ಮದುವೆಯಾಗುತ್ತಾನೆ. ದಾದಯ್ಯ ಅಂದಿನಿಂದ ಮತ್ತಿ ತಿಮ್ಮಣ್ಣನಾಯಕನಿಗೂ ಹರಪನಹಳ್ಳಿಗೂ ಸಂಬಂಧಬೆಳೆಯಿತು. ತಿಮ್ಮಣ್ಣನಾಯಕನ ಅಧೀನದಲ್ಲಿದ್ದ ಉಚ್ಚಂಗಿ ದುರ್ಗದ ಕೋಟೆಯನ್ನು ದಾದಯ್ಯನಾಯಕನಿಗೆ ಬಿಟ್ಟುಕೊಡಲಾಯಿತು. ತಿಮ್ಮಣ್ಣನಾಯಕನ ಮರಣದ ನಂತರ ದಾದಯ್ಯನೊಂದಿಗಿನ ಸಂಬಂಧ ಬಿರಕುಬಿಟ್ಟಿತು ಹರಪನಹಳ್ಳಿ ಚಿತ್ರದುರ್ಗದವರ ನಡಿವೆ ಯುದ್ಧ ಆರಂಭವಾದಗಲೇ ಹೊನ್ನವ್ವನಾಗತಿ ಮರಣ ಹೊದಿಕ ಸುದ್ಧಿ ತಿಳಿಯುತ್ತದೆ.[೫] ದಾದಯ್ಯನಾಯಕ ಸ್ವಲ್ಪಕಾಲದ ನಂತರ ಜರಿಮಲೆ ಪಾಳೆಯಗಾರರ ಪುತ್ರಿ ಜಂಪಾನಾಗತಿ, ಗುಡೇಕೋಟೆ ಬರಮವ್ವನಾಗತಿ, ತರೀಕೆರೆ ಹನುಮಾನಾಗತಿಯನ್ನು ಮದುವೆ ಮಾಡಿಕೊಂಡು ಸಂಬಂಧ ವೃದ್ಧಿಸಿಕೊಂಡನು. ಕ್ರಿ.ಶ. ೧೫೬೫ರಲ್ಲಿ ಹರಪನಹಳ್ಳಿಯಲ್ಲಿ ಕೋಟೆ ಕಟ್ಟಿಸಿ, ಸಿಂಹಾಸನ ರೂಢನಾಗುತ್ತಾನೆ. ದಾದಯ್ಯನಾಯಕನದು ಪುವ್ವಲ ವಂಶವೆಂದು ತಿಳಿಯುತ್ತದೆ. ಧೀರ, ಪರಾಕ್ರಮಿ, ಉದಾರಿಯು ಆಗಿದ್ದನು. ಇವನು ಸುಮಾರು ಮುವತ್ತೈದಕ್ಕು ಹೆಚ್ಚು ವರ್ಷಗಳ ಕಾಲ ರಾಜ್ಯಾಳ್ವಿಕೆ ನಡೆಸಿದ್ದನು. ಹರಪನಹಳ್ಳಿ ಪಾಳೆಯ ಪಟ್ಟುಗೆ ಭದ್ರಬುನಾದಿ ಹಾಕಿದ ಕೀರ್ತಿ ಇವನಿಗೆ ಸಲ್ಲುವುದು.

ಈ ಹರಪನಹಳ್ಳಿ ಸಂಸ್ಥಾನವನ್ನು ರಂಗಣ್ಣನಾಯಕ, ಭರಮಣ್ಣನಾಯಕ, ಹೊಂಬಣ್ಣನಾಯಕ, ವೀರಮುಮ್ಮಡಿನಾಯಕ, ಮುಮ್ಮಡಿನಾಯಕ, ಒಂದನೆಯ ಬಸವಂತನಾಯಕ, ಮರಿಕೊಟ್ರಪ್ಪನಾಯಕ, ಎರಡನೆಯ ಬಸವಂತನಾಯಕ, ಬಾಗಳಿಯ ಹರಿಯಾಮ್ಮಜಿ, ಮುದಿಬಸಪ್ಪನಾಯಕ, ಮೊದಲ ವೀರಬಸಪ್ಪನಾಯಕ, ಮೊದಲ ಸೋಮಶೇಖರನಾಯಕ, ಎರಡನೆಯ ವೀರಬಸಪ್ಪನಾಯಕ, ಬಸಪ್ಪನಾಯಕ, ಎರಡನೆಯ ಸೋಮಶೇಖರನಾಯಕ ಆಳಿದರೆಂದು ಹರಪನಹಳ್ಳಿ ಪಾಳೆಯಗಾರರ ವಂಶಾವಳಿಯಿಂದ

ತಿಳಿದುಬರುತ್ತದೆ. ಬಸಪ್ಪನಾಯಕನಿಗೆ ಪುತ್ರ ಸಂತಾನವಿಲ್ಲದ ಕಾರಣ ತನ್ನ ಅಣ್ಣ ಅಯ್ಯಪ್ಪನಾಯಕನ ದೊಡ್ಡಮಗ ಸೋಮಶೇಖರ ನಾಯಕನನ್ನು ಮಂತ್ರಿ ಹಂಪರಸಪ್ಪ ತಂದು ಪಟ್ಟಾಕಟ್ಟಿಸುತ್ತಾನೆ. ಬಾಲಕನಾಗಿದ್ದ ಇವನಿಗೆ ಗುಡೇಕೋಟೆಯ ಬಸಮ್ಮಾಜಿ, ನೀಲಮ್ಮಾಜಿ ಎಂಬುವರನ್ನು ನಾಯಕನಿಗೆ ಮದುವೆ ಮಾಡಿದರು. ಆಡಳಿತ ನಡೆಸಲು ಯೋಗ್ಯ ಸಂಬಂಧ ಮುಂದುವರೆಯಿತು. ಕುಟಿಲ ನೀತಿಗಳಿಂದ ಆಪ್ತವರ್ಗ ರಾಜನನ್ನು ತ್ಯಜಿಸಿ ದೂರಸರಿದರು. ಆಪ್ತರಲ್ಲಿ ಕೆಲವರು ಸಂಪತ್ತನ್ನು ದೋಚಿದರು. ಇವರಲ್ಲಿ ಕೆಲವರಿಗೆ ಕಠಿಣಶಿಕ್ಷೆ ಆಯಿತು. ಕ್ರಿ.ಶ. ೧೭೯೯ರಲ್ಲಿ ಟಿಪ್ಪು ನಾಲ್ಕನೇ ಆಂಗ್ಲೋ ಮೈಸೂರು ಯುದ್ಧದಲ್ಲಿ ಹತನಾದಾಗ ಹರಪನಹಳ್ಳಿಯವರು ಬ್ರಿಟಿಷರ ಬಗ್ಗೆ ಚಿಂತಿಸಿದರು. ಜನರಲ್ ಹ್ಯಾರಿಸ್ ಮತ್ತು ದಿವಾನ್ ಪೂರ್ಣಯ್ಯ ಹರಿಹರಕ್ಕೆ ಬಂದು ರಾಜ್ಯದಲ್ಲಿ ಕಲಹ, ಗಲಭೆಗಳಾಗದಂತೆ ಉಪಚರಿಸಿದರು. ರಾಜಪ್ರಭುತ್ವಕ್ಕೆ ಕಡಿವಾಣ ಹಾಕಿ ೬೦,೦೦೦ ರೂ. ಜಾಗೀರು ಹಣವನ್ನು ಇವರಿಂದ ವಸೂಲಿ ಮಾಡಿದರು. ಇದನ್ನು ಹರಪನಹಳ್ಳಿ ಅರಸ ಒಪ್ಪಲಿಲ್ಲ. ಆಂಗ್ಲರಿಂದ ಪರಿಹಾರ ಪಡೆಯುವ ಬದಲು ಈ ಅರಸನು ಸೆರೆಮನೆ ಸೇರಬೇಕಾಯಿತು. ಈ ರಾಜ್ಯವನ್ನು ಆಂಗ್ಲರು ವಶಪಡಿಸಿಕೊಂಡು ತನ್ನ ಅಧೀನದಲ್ಲಿದ್ದವರಿಗೆ ಕೆಲವು ಗ್ರಾಮಗಳನ್ನು ಕೊಟ್ಟರು. ಕ್ರಿ.ಶ. ೧೮೫೨ರಲ್ಲಿ ಇವನು ಮರಣ ಹೊಂದಿದ. ಅಂದಿನಿಂದ ಹರಪನಹಳ್ಳಿ ಬ್ರಿಟಿಷರ ವಶಕ್ಕೆ ಹೋಗಿ ಬಳ್ಳಾರಿ ಜಿಲ್ಲೆಯ ತಾಲೂಕು ಕೇಂದ್ರವಾಯಿತು.[೯೬]

ಕ್ರಿ.ಶ. ೧೬೫೫ರಿಂದ ೧೬೬೭ರವರೆಗೆ ಹರಪನಹಳ್ಳಿಯ ಪಾಳೆಯಗಾರನಾಗಿದ್ದ ವೀರಮುಮ್ಮಡಿ ನಾಯಕನೇ ಸ್ಥಳೀಯರು ಉಲ್ಲೇಖಿಸುವ ವೀರನಾಯಕನಿರ ಬಹುದು. ವೀರಮುಮ್ಮಡಿನಾಯಕನು (ಬಸವಂತನಾಯಕ) ತನ್ನ ರಾಜ್ಯ ವಿಸ್ತರಣಾ ಸಮಯದಲ್ಲಿ ವೀರನದುರ್ಗವು ಒಳಪಟ್ಟಿತೆಂದು, ಅದನ್ನು ಹರಪನಹಳ್ಳಿ ಪಾಳೆಯಗಾರರು ಬಲತ್ಕಾರವಾಗಿ ಕಿತ್ತುಕೊಂಡರೆಂಬ ಸಂಗತಿಯೂ ತಿಳಿದುಬರುತ್ತದೆ.[೯೭]

ಹೀಗೆ ಅಂಬಳಿ ಗ್ರಾಮವು ಕೋಗಳಿ-೫೦೦ರ ವ್ಯಾಪ್ತಿಯಲ್ಲಿ ಒಳಪಟ್ಟಿದರಿಂದ ವಿವಿಧ ಕಾಲಘಟ್ಟಗಳಲ್ಲಿ ಮೌರ್ಯರು, ಶಾತವಾಹನರು, ಪಲ್ಲವರು, ಗಂಗರು, ಕದಂಬರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರು, ನೊಳಂಬರು, ಪಾಂಡ್ಯರು, ಸೇವುಣರು, ಹೊಯ್ಸಳರು, ವಿಜಯನಗರದ ಅರಸರು ಮತ್ತು ಪಾಳೆಯಗಾರರು ತಮ್ಮ ಸಾಮ್ರಾಜ್ಯ ಹಾಗೂ ಸಂಸ್ಥಾನದೊಳಗೆ ಸೇರಿಸಿಕೊಂಡು ಆಳ್ವಿಕೆ ನಡೆಸಿದ್ದು, ಇವರ ಕಾಲದಲ್ಲಿ ಈ ಪ್ರದೇಶವು ಐತಿಹಾಸಿಕ ಹಾಗೂ ಸಾಂಸ್ಕೃತಿಕವಾಗಿ ಮಹತ್ವವನ್ನು ಹೊಂದಿದೆ ಎಂದು ಚಾರಿತ್ರಿಕ ಅಧ್ಯಯನದಿಂದ ತಿಳಿದುಬರುತ್ತದೆ.

## ಕೊನೆಟಿಪ್ಪಣಿಗಳು

೧. ನಂಜುಂಡಸ್ವಾಮಿ (ಸಂ), ಕಲ್ಪಸಿರಿ, ಪು, ೩೭-೩೮
೨. ಗೋಪಾಲ್ ಬಾ. ರಾ., ಕರ್ನಾಟಕದಲ್ಲಿ ನವಶಿಲಾಯುಗ, ಪು, ೨೫
೩. ಶಿವತಾರಕ್ ಕೆ. ಬಿ., ತುಮಕೂರು ಜಿಲ್ಲೆಯ ಪುರಾತತ್ವ ಕುರುಹುಗಳು; ಒಂದು ಸಾಂಸ್ಕೃತಿಕ ಅಧ್ಯಯನ (ಅಪ್ರಕಟಿತ) ಪಿ.ಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ. ಹಂಪಿ, ಪು, ೭
೪. ಅಂಬಳಿಕೆ ಹಿರಿಯಣ್ಣ ಮತ್ತು ಇತರರು, ಕನ್ನಡ ವಿಷಯ ವಿಶ್ವಕೋಶ ಇತಿಹಾಸ ಮತ್ತು ಪುರಾತತ್ವ, ಪು, ೨೫೧-೨೫೨
೫. ಸುಂದರ ಅ., ಕರ್ನಾಟಕ ಚರಿತ್ರೆ ಸಂಪುಟ-೧, ಪು, ೨೪೧
೬. ಶಿವತಾರಕ್ ಕೆ.ಬಿ., ಪೂರ್ವೋಕ್ತ, ಪು, ೧೦
೭. ಅದೇ, ಪು, ೪
೮. ಸುಂದರ ಅ., ಪೂರ್ವೋಕ್ತ, ಪು, ೧೧೬
೯. ತಿಪ್ಪೇಶ್ ಹೆಚ್.ಎಂ., ಕೂಡ್ಲಿಗಿ ತಾಲೂಕಿನ ಬೃಹತ್ ಶಿಲಾಯುಗದ ನೆಲೆಗಳು, ಅಪ್ರಕಟಿತ ಎಂ.ಫಿಲ್. ಪ್ರೌಢ ಪ್ರಬಂಧ., ಪು, ೧೯
೧೦. ಸುಂದರ ಅ., ಪೂರ್ವೋಕ್ತ, ಪು, ೧೧೬
೧೧. ಅದೇ, ಪು, ೧೨೩
೧೨. ಅದೇ, ಪು, ೧೨೪
೧೩. ತಿಪ್ಪೇಸ್ವಾಮಿ ಹೆಚ್. ಪೂರ್ವೋಕ್ತ, ಪು, ೩
೧೪. ಸುಂದರ ಅ., ಪೂರ್ವೋಕ್ತ, ಪು ೧೨೪
೧೫. ಅದೇ, ಪೂರ್ವೋಕ್ತ, ಪು, ೧೨೫
೧೬. ಅದೇ, ಪೂರ್ವೋಕ್ತ, ಪು, ೧೩೯
೧೭. ಇರ್ಫಾನ್ ಹಬೀಬ್, ಪೂರ್ವೇತಿಹಾಸ, ಪು, ೮೦
೧೮. ಶಿವತಾರಕ್ ಕೆ.ಬಿ. ಪೂರ್ವೋಕ್ತ, ಪು, ೩೫೭
೧೯. ಮಂಜನಾಯ್ಕ ಆರ್. ಕೂಡ್ಲಿಗಿ ಮತ್ತು ಹಗರಿಬೊಮ್ಮನಹಳ್ಳಿ ತಾಲೂಕುಗಳ
೨೦. ಪುರಾತತ್ವೀಯ ಅಧ್ಯಯನ, (ಅಪ್ರಕಟಿತ) ಪಿ.ಎಚ್.ಡಿ. ಮಹಾಪ್ರಬಂಧ. ಅಧ್ಯಯನ, ಪು, ೭೯
೨೧. ಶರ್ಮ ಆರ್.ಎಸ್. ಪ್ರಾಚೀನ ಭಾರತ, ಪು, ೪೨
೨೨. ನಾಗಯ್ಯ ಜೆ.ಎಂ. ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ, ಪು, ೧೨-೨೨
೨೩. ವಾಸುದೇವ ಬಡಿಗೇರ, ಬಳ್ಳಾರಿ ಪರಿಸರದ ಸಾಂಸ್ಕೃತಿಕ ಪರಂಪರೆ, ಭಾಗ-೧, ಪು,೧-೨
೨೪. ನಾಗಯ್ಯ ಜೆ.ಎಂ., ಪೂರ್ವೋಕ್ತ, ಪು, ೨೬
೨೫. ಸುರೇಶ ಬಿ. ಚಿತ್ರದುರ್ಗ ದಾವಣಗೆರೆ ಜಿಲ್ಲೆಯ ದೇವಾಲಯಗಳು., ಪು,೧೩
೨೬. ನಾಗಯ್ಯ ಜೆ.ಎಂ. ಪೂರ್ವೋಕ್ತ, ಪು, ೨೭
೨೭. ಅದೇ, ಪು, ೨೭

೨೮. ಸುರೇಶ ಬಿ. ಪೂರ್ವೋಕ್ತ, ಪು, ೧೬
೨೯. ವಾಸುದೇವ ಬಡಿಗೇರ, ಪೂರ್ವೋಕ್ತ, ಪು, ೪೮
೩೦. ದೇವರಕೊಂಡಾರೆಡ್ಡಿ (ಸಂ) ಕಲವೀರ ಮನ್ವಾಚಾರ್, ಭಟ್‌ಸೂರಿ ಕೆ.ಜಿ.,
೩೧. ಪರಮಶಿವಮೂರ್ತಿ ಡಿ.ವಿ., (ಸ.ಸಂ), ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೧ ಬಳ್ಳಾರಿ ಜಿಲ್ಲೆ, ಪು, ೩೭೧
೩೨. ವಾಸುದೇವ ಬಡಿಗೇರ, ಪೂರ್ವೋಕ್ತ, ಪು, ೪೮
೩೩. ಅದೇ, ಪು, ೩೦
೩೪. ಚನ್ನಬಸಪ್ಪ ಎಸ್. ಪಾಟೀಲ್ ಮತ್ತು ವಿನೋದಾ ಪಾಟೀಲ್, ಕರ್ನಾಟಕ ಶಾಸನಗಳು, ಸಂಪುಟ-೨, ಬಳ್ಳಾರಿ ಜಿಲ್ಲೆಯ ಶಾಸನಗಳು, ಪು, ೭೭
೩೫. ಅದೇ, ಪು, ೧೫೩
೩೬. ದೇವರಕೊಂಡಾರೆಡ್ಡಿ ಮತ್ತು ಇತರರು, ಪೂರ್ವೋಕ್ತ, ಪು, ೨೩೨
೩೭. ಅದೇ, ಪು, ೪೯
೩೮. ಅದೇ, ಪು, ೨೬೩
೩೯. ನಾಗಯ್ಯ ಜೆ.ಎಂ. ಪೂರ್ವೋಕ್ತ, ಪು, ೩೨
೪೦. ಅದೇ, ಪು, ೩೨
೪೧. ವಾಸುದೇವ ಬಡಿಗೇರ, ಪೂರ್ವೋಕ್ತ, ಪು, ೫೦
೪೨. ಚನ್ನಬಸಪ್ಪ ಎಸ್. ಪಾಟೀಲ್ ಮತ್ತು ವಿನೋದಾ ಪಾಟೀಲ್, ಪೂರ್ವೋಕ್ತ, ಪು ೭೯
೪೩. ವಾಸುದೇವ ಬಡಿಗೇರ, ಪೂರ್ವೋಕ್ತ, ಪು, ೫೦
೪೪. ಅದೇ, ಪು, ೫೧
೪೫. ಮಂಜನಾಯ್ಕ ಆರ್. ಕೂಡ್ಲಿಗಿ ಮತ್ತು ಹಗರಿಬೊಮ್ಮನಹಳ್ಳಿ ತಾಲೂಕುಗಳ ಪುರಾತತ್ವೀಯ ಅಧ್ಯಯನ. ಪಿ.ಎಚ್.ಡಿ. (ಅಪ್ರಕಟಿತ) ಮಹಾಪ್ರಬಂಧ., ಪು, ೪೬
೪೬. ದೇವರಕೊಂಡಾರೆಡ್ಡಿ ಮತ್ತು ಇತರರು ಪೂರ್ವೋಕ್ತ, ಪು, ೨೯೦
೪೭. ಅದೇ. ಪು, ೨೮೨
೪೮. ಅದೇ, ಪು, ೨೮೭
೪೯. ಅದೇ, ಪು, ೨೫೨
೫೦. ಅದೇ, ಪು, ೨೨೨
೫೧. ಚನ್ನಬಸಪ್ಪ ಎಸ್. ಪಾಟೀಲ್ ಮತ್ತು ವಿನೋದಾ ಪಾಟೀಲ. ಪೂರ್ವೋಕ್ತ, ಪು, ೮೪
೫೨. ದೇವರಕೊಂಡಾರೆಡ್ಡಿ ಮತ್ತು ಇತರರು ಪೂರ್ವೋಕ್ತ, ಪು, ೨೨೭
೫೩. ವಾಸುದೇವ ಬಡಿಗೇರ, ಪೂರ್ವೋಕ್ತ, ಪು, ೬೦
೫೪. ಅದೇ, ಪು, ೬೧
೫೫. ನಾಗಯ್ಯ ಜೆ.ಎಂ., ಪೂರ್ವೋಕ್ತ, ಪು, ೪೮
೫೬. ವಾಸುದೇವ ಬಡಿಗೇರ, ಪೂರ್ವೋಕ್ತ, ಪು, ೭೦

೫೭. ಅದೇ, ಪು, ೭೦

೫೮. ದೇವರಕೊಂಡಾರೆಡ್ಡಿ ಮತ್ತು ಇತರರು. ಪೂರ್ವೋಕ್ತ, ಪು, ೨೯೦

೫೯. ಚನ್ನಬಸಪ್ಪ ಎಸ್. ಪಾಟೀಲ್ ಮತ್ತು ವಿನೋದಾ ಪಾಟೀಲ್, ಪೂರ್ವೋಕ್ತ, ಪು, ೭೯

೬೦. ದೇವರಕೊಂಡಾರೆಡ್ಡಿ ಮತ್ತು ಇತರರು. ಪೂರ್ವೋಕ್ತ, ಪು, ೭೮

೬೧. ಅದೇ, ಪು, ೨೮೭

೬೨. ವಾಸುದೇವ ಬಡಿಗೇರ, ಪೂರ್ವೋಕ್ತ, ಪು, ೭೮

೬೩. ನಾಗಯ್ಯ ಜೆ.ಎಂ., ಪೂರ್ವೋಕ್ತ, ಪು, ೬೯

೬೪. ದೇವರಕೊಂಡಾರೆಡ್ಡಿ ಮತ್ತು ಇತರರು, ಪೂರ್ವೋಕ್ತ, ಪು, ೨೫೬

೬೫. ಚನ್ನಬಸಪ್ಪ ಎಸ್. ಪಾಟೀಲ ಮತ್ತು ವಿನೋದಾ ಪಾಟೀಲ, ಪೂರ್ವೋಕ್ತ, ಪು, ೭೫

೬೬. ಅದೇ, ಪು, ೧೫೫

೬೭. ದೇವರಕೊಂಡಾರೆಡ್ಡಿ ಮತ್ತು ಇತರರು, ಪೂರ್ವೋಕ್ತ, ಪು, ೨೬೦

೬೮. ಅದೇ, ಪು, ೨೬೧

೬೯. ಚನ್ನಬಸಪ್ಪ ಎಸ್. ಪಾಟೀಲ ಮತ್ತು ವಿನೋದಾ ಪಾಟೀಲ, ಪೂರ್ವೋಕ್ತ, ಪು, ೮೪

೭೦. ಮಂಜನಾಯ್ಕ ಆರ್. ಪೂರ್ವೋಕ್ತ, ಪು, ೨೦

೭೧. ನಾಗಯ್ಯ ಜೆ.ಎಂ. ಪೂರ್ವೋಕ್ತ, ಪು, ೫೧

೭೨. ದೇವರಕೊಂಡಾರೆಡ್ಡಿ ಮತ್ತು ಇತರರು, ಪೂರ್ವೋಕ್ತ, ಪು, ೨೯೬

೭೩. ಚನ್ನಬಸಪ್ಪ ಎಸ್. ಪಾಟೀಲ ಮತ್ತು ವಿನೋದಾ ಪಾಟೀಲ, ಪೂರ್ವೋಕ್ತ, ಪು, ೭೪

೭೪. ದೇವರಕೊಂಡಾರೆಡ್ಡಿ ಮತ್ತು ಇತರರು, ಪೂರ್ವೋಕ್ತ, ಪು, ೨೨೭

೭೫. ವಾಸುದೇವ ಬಡಿಗೇರ, ಪೂರ್ವೋಕ್ತ, ಪು, ೬೫

೭೬. ಅದೇ, ಪು, ೬೬

೭೭. ದೇವರಕೊಂಡಾರೆಡ್ಡಿ ಮತ್ತು ಇತರರು, ಪೂರ್ವೋಕ್ತ, ಪು, ೨೩೪

೭೮. ಚನ್ನಬಸಪ್ಪ ಎಸ್. ಪಾಟೀಲ ಮತ್ತು ವಿನೋದಾ ಪಾಟೀಲ, ಪೂರ್ವೋಕ್ತ, ಪು, ೭೮

೭೯. ಅದೇ, ಪು, ೧೫೧

೮೦. ದೇವರಕೊಂಡಾರೆಡ್ಡಿ ಮತ್ತು ಇತರರು, ಪೂರ್ವೋಕ್ತ, ಪು, ೨೭೩

೮೧. ಮಂಜನಾಯ್ಕ ಆರ್. ಪೂರ್ವೋಕ್ತ, ಪು, ೨೩

೮೨. ದೇವರಕೊಂಡಾರೆಡ್ಡಿ ಮತ್ತು ಇತರರು, ಪೂರ್ವೋಕ್ತ, ಪು, ೨೩೯

೮೩. ಚನ್ನಬಸಪ್ಪ ಎಸ್. ಪಾಟೀಲ ಮತ್ತು ವಿನೋದಾ ಪಾಟೀಲ, ಪೂರ್ವೋಕ್ತ, ಪು, ೬೯

೮೪. ದೇವರಕೊಂಡಾರೆಡ್ಡಿ ಮತ್ತು ಇತರರು. ಪೂರ್ವೋಕ್ತ, ಪು, ೨೨೧

೮೫. ಅದೇ, ಪು, ೨೬೪

೮೬. ಅದೇ, ಪು, ೨೨೭

೮೭. ಚನ್ನಬಸಪ್ಪ ಎಸ್. ಪಾಟೀಲ ಮತ್ತು ವಿನೋದಾ ಪಾಟೀಲ, ಪೂರ್ವೋಕ್ತ, ಪು, ೭೩

೮೮. ಅದೇ, ಪು, ೭೫

೮೯. ದೇವರಕೊಂಡಾರೆಡ್ಡಿ ಮತ್ತು ಇತರರು, ಪೂರ್ವೋಕ್ತ, ಪು, ೩೦೧

೯೦. ಅದೇ, ಪು, ೨೩೧

೯೧. ಚನ್ನಬಸಪ್ಪ ಎಸ್. ಪಾಟೀಲ ಮತ್ತು ವಿನೋದಾ ಪಾಟೀಲ, ಪೂರ್ವೋಕ್ತ, ಪು, ೧೫೨

೯೨. ದೇವರಕೊಂಡಾರೆಡ್ಡಿ ಮತ್ತು ಇತರರು, ಪೂರ್ವೋಕ್ತ, ಪು, ೨೨೦

೯೩. ಪೂಜಾರಹಳ್ಳಿ ವಿರೂಪಾಕ್ಷಿ. ಬಳ್ಳಾರಿ ಜಿಲ್ಲೆಯ ಪಾಳೆಯಗಾರರು, ಪು, ೧೬

೯೪. ಅದೇ, ಪು, ೬೯

೯೫. ಅದೇ, ಪು, ೭೧

೯೬. ಅದೇ, ಪು, ೭೯

೯೭. ಸೋಮಶೇಖರ ಎಸ್.ವೈ. ಕೂಡ್ಲಿಗಿ ತಾಲೂಕಿನ ವೀರನದುರ್ಗದ ಕೋಟೆ ಇತಿಹಾಸ ದರ್ಶನ ಸಂಪುಟ-೧೪, ಪು, ೧೮೯

೯೮. ಕೊಟ್ರೇಶ್ ಎಂ. ಬಳ್ಳಾರಿ ಜಿಲ್ಲೆಯ ಕೋಟೆಗಳು, ಪು, ೫೨

# ಅಧ್ಯಾಯ – ನಾಲ್ಕು

## ಸ್ಮಾರಕಗಳು

### ೪.೧ ದೇವಾಲಯ

'ದೇವಾಲಯಗಳು' ಮಾನವನ ಧಾರ್ಮಿಕ ಶ್ರದ್ಧೆ, ಭಕ್ತಿ, ನಂಬಿಕೆಗಳ ಪ್ರತೀಕಗಳಾಗಿ ಬೆಳೆದು ಬಂದಿವೆ. ಮಳೆ, ಗಾಳಿ, ಗುಡುಗು, ಸಿಡಿಲು ಮೊದಲಾದವುಗಳು ಮಾನವನಲ್ಲಿ ಭಯ, ಭೀತಿ ಹುಟ್ಟಿಸಿದವು. ಇದು ನಿಸರ್ಗದ ಅದ್ಭುತ ಶಕ್ತಿಯಾಗಿದೆ ಎಂಬುದನ್ನರಿತ ಮಾನವ ಆ ಶಕ್ತಿಯನ್ನೇ ದೇವರೆಂದು ನಂಬಿದ. ನಿಸರ್ಗದ ಎಲ್ಲ ವಸ್ತುಗಳು ಅವನಿಗೆ ಪೂಜ್ಯಾರ್ಹವಾದವು, ಈ ಅದ್ಭುತ ಶಕ್ತಿಗೆ ಪ್ರತಿಮೆ ರೂಪ ನೀಡಿ ಪೂಜಿಸಲು ಆರಂಭಿಸಿದ ಈ ಆಲಯವೇ ದೇವಾಲಯ ನಿರ್ಮಾಣವಾಗಲು ಕಾರಣವಾಯಿತು. ಮಾನವ ತನಗಾಗಿ ವಾಸಿಸಲು ಕಟ್ಟಿಕೊಂಡ ಮನೆ 'ಗೃಹವಾಸ್ತು' ಶಿಲ್ಪವಾಗಿದೆ. ದೇವರಿಗಾಗಿ ಕಟ್ಟಿದ್ದು, 'ದೇವಾಲಯ ವಾಸ್ತುಶಿಲ್ಪ' ಎನಿಸಿತು. ಗುಡಿ, ದೇಗುಲ, ದೇವಾಲಯ, ದೇವಮಂದಿರ, ದೇವಸ್ಥಾನ ಎಂಬ ಇತ್ಯಾದಿ ಹೆಸರುಗಳು. ದೇವಾಲಯದ ವಿಕಾಸದ ವಿವಿಧ ಮಜಲುಗಳನ್ನು ಗುರುತಿಸುವುದು ಸಾಧ್ಯವಾದರೂ ದೇವಾಲಯ ನಿರ್ಮಾಣ ಎಂದು ಆರಂಭವಾಯಿತೆಂಬುದು ಖಚಿತವಾಗಿ ಹೇಳಲು ಸಾಧ್ಯವಾಗಿಲ್ಲ.[೧]

### ೪.೧.೧ ದೇವಾಲಯದ ಪಾರ್ಶ್ವನೋಟ

ದೇವಾಲಯಗಳು ಸಾಮಾನ್ಯವಾಗಿ ಶಿಖರ ಭಾಗವನ್ನು ಹೊಂದಿದ್ದು, ಕಾಲನಂತರದಲ್ಲಿ ಈಗ ಕಂಡುಬರುತ್ತಿಲ್ಲ. ಆದರೆ ದೇವಾಲಯದ ಗರ್ಭಗೃಹದ ಮೇಲೆ ಇರುವ ವೇಸರ ಮಾದರಿಯ ಶಿಖರವು, ವಿಮಾನವು ಹಂತ ಹಂತವಾಗಿ ಕಿರಿದಾಗುತ್ತಾ ಹೋಗಿರುವ ಹಂತಗಳನ್ನು ಕಾಣಬಹುದು. ಪ್ರತಿಹಂತವೂ ಕೆಳಗಿನ ಹಂತದ ರೀತಿಯಲ್ಲೇ ಇದ್ದು ಮೇಲೇರುತ್ತಾ ಕಿರಿದಾಗಿದೆ. ಅವುಗಳಿಗೆ ಹೊಂದಿಕೊಂಡು ಮುಂಭಾಗಕ್ಕೆ ಚಾಚಿಕೊಂಡ ಸುಖನಾಸಿಗಳಿದ್ದು, ಅವುಗಳಲ್ಲಿ ದೇವಕೋಷ್ಟಕಗಳಿವೆ. ಅಂತ್ಯದಲ್ಲಿ ಗ್ರೀವ, ಶಿಖರ, ಹಾಗೂ ಸ್ತೂಪಿಯಿದೆ. ಭೀತಿಗಳು ಸಾಮಾನ್ಯವಾಗಿ ಹಿಂಬಣೆ, ಮುಂಬಣೆ ಮತ್ತು ಕಲಾತ್ಮಕ ವಿನ್ಯಾಸವನ್ನು ಹೊಂದಿರುತ್ತವೆ.

### ೪.೧.೨ ತಲ ವಿನ್ಯಾಸ

ವಾಸ್ತವಾಗಿ ತಲವಿನ್ಯಾಸವೇ ವಾಸ್ತು ಶೈಲಿಯನ್ನು ನಿರ್ಧರಿಸುವ ಪ್ರಮುಖ ಸೂಚಿ, ಆದರಿಂದಲೇ ಒಂದು ದೇವಾಲಯದ ವಾಸ್ತುರಚನೆಯ ಸತ್ತ್ವ ಹಾಗೂ ಸೊಬಗು ಎಲ್ಲಿರುತ್ತವೆ ಅವುಗಳ ಗುಣಲಕ್ಷಣಗಳೇನು ಎಂಬುದನ್ನು ತಿಳಿಯಬೇಕಾದರೆ ಆ ಕಟ್ಟಡದ ಅಂಗಭಾಗಗಳನ್ನು ವಿವರವಾಗಿ ಪರಿಶೀಲಿಸಬೇಕು. ಕಣ್ಣಿಗೆ ಕಾಣುವ ಕಟ್ಟಡದ ಒಟ್ಟು ನೋಟದಲ್ಲಿ ಅದರ ಪಾಯ, ಭಿತ್ತಿ, ಮಾಡುಗಳು ಮುಖ್ಯ ಪಾತ್ರ ವಹಿಸುತ್ತವೆ. ಇವುಗಳಲ್ಲೆಲ್ಲಾ ತಲ ವಿನ್ಯಾಸ, ಅದರಲ್ಲೂ ಗರ್ಭಗೃಹದ ತಲ ವಿನ್ಯಾಸ ವಿಶೇಷವಾದ ಮಹತ್ವ ಪಡೆದಿದೆ.[೨]

## ೪.೧.೩ ದೇವಾಲಯದ ಭಾಗಗಳು

### ೩.೧ ಅಧಿಷ್ಠಾನ

ತಳಪಾಯ ಎಂದು ಕರೆಯಲ್ಪಡುವ ತಳಹದಿಯ ಮೇಲೆ ಅಧಿಷ್ಠಾನವಿರುತ್ತದೆ. ಇದು ಭಿತ್ತಿಗಳ ಕೆಳಭಾಗದಲ್ಲಿದ್ದು, ದೇವಾಲಯದ ವಾಸ್ತುವಿನಲ್ಲಿ ಪ್ರಮುಖ ಭಾಗವಾಗಿದೆ.[೬] ಅಂಬಳಿ ಕಲ್ಲೇಶ್ವರ ದೇವಾಲಯದ ಹೋರಭಾಗದ ಅಧಿಷ್ಠಾನದಲ್ಲಿ ಉಪಾನ, ಜಗತಿ, ಕಂಠ, ಕುಮುದ ಹಾಗೂ ಪದ್ಮ ಭಾಗಗಳು ಕಂಡುಬರುತ್ತವೆ.

### ೩.೨ ಭಿತ್ತಿ

ಅಧಿಷ್ಠಾನದ ಮೇಲಿನ ಭಾಗವೇ ಭಿತ್ತಿ. (ಗೋಡೆ) ಅಂಬಳಿ ಕಲ್ಲೇಶ್ವರ ದೇವಾಲಯದ ಗರ್ಭಗೃಹದ ಹೊರಭಿತ್ತಿಯಲ್ಲಿ ಸುಂದರವಾದ ದೇವಕೋಷ್ಠಕಗಳಿವೆ. ಇವು ಕೀರ್ತಿಮುಖ ಹಾಗೂ ಮಕರ ತೋರಣಗಳಿಂದ ಅಲಂಕೃತಗೊಂಡು ಇವುಗಳು ಕಪೋತ ಭಾಗವನ್ನು ತಲುಪಿವೆ. ಇವುಗಳ ಪಾರ್ಶ್ವಗಳಲ್ಲಿ ಅರ್ಧಗಂಬಗಳಿವೆ. ಗೋಡೆಗಳಲ್ಲಿ ಆನೆಗಳು, ಯಕ್ಷರು, ಹಾರಾಡುವ ಗಂಧರ್ವರು, ಹೂ-ಬಳ್ಳಿಗಳು, ನೃತ್ಯಗಾರ್ತಿಯರು ಹಾಗೂ ಮತ್ತಿತರ ಉಬ್ಬುಶಿಲ್ಪಗಳನ್ನು ಕೆತ್ತಲಾಗಿದೆ.

### ೩.೩ ಬಾಗಿಲುವಾಡ (ದ್ವಾರ ಬಾಗಿಲು)

ಮಧ್ಯಕಾಲೀನ ದೇವಾಲಯಗಳಲ್ಲಿ ಹೆಚ್ಚಿನವು ಕಲ್ಯಾಣ ಚಾಲುಕ್ಯರ ಕಾಲಕ್ಕೆ ಸೇರಿದವುಗಳಾಗಿವೆ. ದೇವಾಲಯಗಳ ಗರ್ಭಗೃಹ, ಅಂತರಾಳದ ಬಾಗಿಲುವಾಡಗಳು ಕಲಾತ್ಮಕವಾದ ದ್ವಾರಬಂಧದ ವಿನ್ಯಾಸಕ್ಕೆ ತಳಹದಿಯಾಗಿವೆ. ಸುಮಾರು ೪ ರಿಂದ ೫ ಪಟ್ಟಿಕೆಗಳನ್ನು ಹೊಂದಿರುವ ದೇವಾಲಯವೆಂದರೆ. ಅಧ್ಯಯನ ಪ್ರದೇಶವಾದ ಅಂಬಳಿ ಕಲ್ಲೇಶ್ವರ ದೇವಾಲಯದ ಹಾಗೂ ರಾಮಲಿಂಗೇಶ್ವರ ದೇವಾಲಯದ ಗರ್ಭಗೃಹದ ದ್ವಾರವು ವಜ್ರಕಾರ, ರತ್ನ, ಹೂವು, ಸುರುಳಿಅಲಂಕಾರ, ಅರ್ಧಗಂಬ ಹೀಗೆ ಐದು ಶಾಖೆಗಳಿಂದ ಅಲಂಕರಿಸಲ್ಪಟ್ಟಿದೆ. ಹಾಗೂ ಇಕ್ಕೆಲಗಳಲ್ಲಿ ತ್ರಿಶೂಲ, ಡಮರು, ಮತ್ತು ಗದೆ ಹಿಡಿದು ನಿಂತ ದ್ವಾರಪಾಲಕರ ಶಿಲ್ಪಗಳಿವೆ. ಗರ್ಭಗೃಹ ಹಾಗೂ ಅಂತರಾಳದ ದ್ವಾರಗಳ ಲಲಾಟಬಿಂಬದಲ್ಲಿರುವ ಗಜಲಕ್ಷ್ಮಿಯ ಚಿತ್ರಣ ಬಹಳ ಸುಂದರವಾದದ್ದಾಗಿದೆ.

### ೩.೪ ಕಂಬಗಳು

ಕಂಬಗಳು ದೇವಾಲಯದ ಪ್ರಮುಖವಾದ ಅವಿಭಾಜ್ಯ ಅಂಗಗಳಾಗಿವೆ. ಭುವನೇಶ್ವರಿಯನ್ನು ಒಳಗೊಂಡು ದೇವಾಲಯದ ಮೇಲ್ಕಟ್ಟಡವನ್ನು ಹಿಡಿದು ನಿಂತಿರುವುದೇ ಈ ಕಂಬಗಳಾಗಿವೆ. ಅರೆಗಂಬಗಳು ಗೋಡೆಯೊಂದಿಗೆ ನಿಂತುಕೊಂಡು ಹೊರಭಾಗದಲ್ಲಿ ಭಿತ್ತಿಯ ಭಾಗವಾಗಿರುತ್ತವೆ. ಆದರೆ ಗೋಡೆಯನ್ನು ಬಿಟ್ಟು ಸಾಮಾನ್ಯವಾಗಿ ನವರಂಗ ಮತ್ತು ಮುಖಮಂಟಪಗಳಲ್ಲಿನ ಕಂಬಗಳು ಸ್ವತಂತ್ರವಾಗಿರುತ್ತವೆ.[೪]

**೪. ಪೀಠ**

ಕಂಬಗಳು ಚತುಸ್ರವಾಗಿರಲಿ ವೃತ್ತಾಕಾರವಾಗಿರಲಿ ಇವುಗಳ ಕೆಳಗೆ ಪೀಠವಿದ್ದು, ಸುಮಾರು ಅರ್ಧ ಅಡಿ ಎತ್ತರದಲ್ಲಿರುತ್ತದೆ. ಈ ಪೀಠ ನಾಲ್ಕು ಮೂಲೆಯ ಸಾದಾ ಕಲ್ಲಾಗಿರಬಹುದು ಅಥವಾ ಅಲಂಕಾರಿಕ ಕೆತ್ತನೆಯಾಗಿರಬಹುದು ಅಂಬಳಿ ಕಲ್ಲೇಶ್ವರ ಮತ್ತು ರಾಮಲಿಂಗೇಶ್ವರ ದೇವಾಲಯಗಳ ನವರಂಗದಲ್ಲಿರುವ ಕಂಬಗಳು ಪೀಠದ ಭಾಗದಲ್ಲಿ ಅಲಂಕಾರಿಕ ಕೆತ್ತನೆಯನ್ನು ಹೊಂದಿವೆ.

**ಕಂಬದ ಪ್ರಕಾರಗಳು**

ಕಂಬಗಳಲ್ಲಿ ೧. ಪದ್ಮಕಾಂತ ೨. ಚಿತ್ರಸ್ತಂಭ ೩. ಕುಂಭಸ್ತಂಭ ೪. ಕೋಷ್ಟಿ ಸ್ತಂಭ ೫. ಸಂಯೋಗಾಸ್ತ ಸ್ತಂಭ ಎಂಬ ಐದು ಪ್ರಕಾರಗಳಿವೆ. ಇದರಲ್ಲಿ ಕುಂಭಸ್ತಂಭ, ಚಿತ್ರಸ್ತಂಭ ರಚನೆ ಅಲ್ಲಲ್ಲಿ ಕಾಣಬಹುದಾಗಿದೆ. ಹೆಚ್ಚಾಗಿ ಸರಳವಾದ ಸಾಧಾರಣ ಕಂಬದ ರಚನೆಗಳು ಹೆಚ್ಚು. ಕಂಬದ ರಚನೆಯ ಮೂಲ ಪೀಠವಾದರೆ ನಂತರ ಪಾದ, ದಂಡ, ಗ್ರೀವ ರಚನೆಗೊಂಡಿರುತ್ತವೆ. ಗ್ರೀವದ ಕೆಲ ಭಾಗಗಳು ಮೈತಳೆದಿರುತ್ತವೆ. ಕಲ್ಮಶ, ಹಾರಿಕಾ, ಆಸ್ಯ, ತಾಟಿಕ, ಕಂಠ, ಕುಂಭ, ನಿಮ್ನಕ, ಫಲಕ, ವೀರ ಇವುಗಳ ಮೇಲೆ ಬರುವ ಬೋದಿಗೆಗಳು ನಿರ್ಮಿಸಲಾಗಿರುತ್ತಾರೆ. ಬೋದಿಗೆಯಲ್ಲಿ ತರಂಗ ಬೋದಿಗೆ. ಪುಷ್ಪಬೋದಿಗೆ ಎಂಬ ಎರಡು ವಿಧಗಳು ಇರುತ್ತವೆ.[೫]

**೩.೫ ಬೋದಿಗೆಗಳು**

ಕಂಬದ ಮತ್ತೊಂದು ಭಾಗವೆಂದರೆ ಬೋದಿಗೆ. ಪೀಠ–ಕಾಂಡ–ಮುಚ್ಚಳ–ಫಲಕ ಮತ್ತು ಕಂಠದ ನಂತರ ಬೋದಿಗೆ ಬರುತ್ತದೆ. ಸಾಮಾನ್ಯವಾಗಿ ನಾಲ್ಕು ಕಡೆಯ ತೊಲೆಯ ಭಾರ ಹೋರುವ ಉದ್ದೇಶದಿಂದ ಬೋದಿಗೆ ಬಂದಿರುತ್ತದೆ. ಹಾಗೂ ಅದಕ್ಕೆ ನಾಲ್ಕು ಮುಖಗಳಿರುತ್ತವೆ. ಬೋದಿಗೆಗಳು ತಳಭಾಗದಲ್ಲಿ ಸಮತಲವಾಗಿದ್ದು, ಮೇಲಕ್ಕೆ ಇಳಿಜಾರಾಗಿ ಮುಂದುವರೆದು ಅನಂತರ ಮೇಲಕ್ಕೆ ನೇರವಾಗಿ ಸಾಗುತ್ತವೆ. ಬೋದಿಗೆಯಲ್ಲಿ ಅನೇಕ ವಿಧಗಳಿವೆ.[೬]

**೩.೬ ಅಂಕಣ ವ್ಯವಸ್ಥೆ (ಭುವನೇಶ್ವರಿ)**

ಸಾಮಾನ್ಯವಾಗಿ ದೇವಾಲಯಗಳಲ್ಲಿ ಗರ್ಭಗೃಹ, ಅಂತರಾಳ, ನಂತರ ನವರಂಗ ಬರುತ್ತದೆ. ನವರಂಗದಲ್ಲಿ ಮಧ್ಯದ ನಾಲ್ಕು ಕಂಬಗಳು ಪ್ರಮುಖವಾಗಿದ್ದು, ಭುವನೇಶ್ವರಿಯನ್ನು ಹೊತ್ತು ನಿಂತಿರುತ್ತವೆ. ಭುವನೇಶ್ವರಿ ಈ ಭಾಗವನ್ನು ಅಂಕಣ ಅಥವಾ ಮುಚ್ಚಿಗೆ ಎಂದು ಕರೆಯುತ್ತಾರೆ.[೭]

**೩.೭ ಜಾಲಾಂಧ್ರಗಳು**

ದೇವಾಲಯಗಳ ಒಳಭಾಗದಲ್ಲಿ ಬೆಳಕನ್ನು ಹರಡುವುದೇ ಜಾಲಂಧಗಳ ಪ್ರಧಾನ ಕಾರ್ಯ, ಜೊತೆಗೆ ಮಂದಿರ(ದೇವಾಲಯ)ದ ಚೆಲುವನ್ನು ಇವು ಹೆಚ್ಚಿಸುತ್ತವೆ. ಕಲಾತ್ಮಕ ಜಾಲಂಧರಗಳು ಕಲ್ಯಾಣ ಚಾಲುಕ್ಯರ ದೇವಾಲಯಗಳಲ್ಲಿ ಕಂಡುಬರುವ ವಾಸ್ತು ವೈಶಿಷ್ಟ್ಯವಾಗಿದೆ. ಈ ಜಾಲಂಧರಗಳು ಸಾಮಾನ್ಯವಾಗಿ ದ್ವಾರಗಳ ಎರಡೂ ಬದಿಗೆ ಅಂದರೆ ದ್ವಾರಶಾಖೆ ಮತ್ತು

ಅರ್ಧಗಂಬಗಳ ನಡುವೆ ಇರುತ್ತವೆ.[೮] ಈ ರೀತಿ ಅಂಬಳಿ ಕಲ್ಲೇಶ್ವರ ದೇವಾಲಯದಲ್ಲಿ ಕಾಣಬಹುದು.

### ೪.೧.೪ ಶೈವ ದೇವಾಲಯಗಳು

ಸಿಂಧೂ ನಾಗರಿಕತೆಯ ಹರಪ್ಪ, ಮೊಹೆಂಜೋದಾರೋ, ಕಾಲಿಬಂಗಾನ್ ಮೊದಲಾದ ನೆಲೆಗಳಲ್ಲಿ ದೊರೆತ ಶಿವಲಿಂಗವನ್ನು ಹೋಲುವ ಕುರುಹುಗಳು ಪಶುಪತಿ ಮುದ್ರೆಗಳು, ವೈದಿಕ ಸಾಹಿತ್ಯದ ಮಂತ್ರಗಳಲ್ಲಿ ಪ್ರಾಸ್ತಪಿತ ರುದ್ರ, ಪಶು, ಶಿವ, ವೈಷ್ಣವ, ಕಪರ್ದಿನಿ, ಮೊದಲಾದ ಪದಗಳು, ಮಹಾಕಾವ್ಯಗಳು, ಪುರಾಣಗಳು, ಸಾಹಿತ್ಯದಲ್ಲಿ ಪ್ರಸ್ತಾಪಿತ ವಿಚಾರಗಳಿಂದ ಶೈವ ಧರ್ಮದ ಪ್ರಾಚೀನತೆಯನ್ನು ಗುರುತಿಸಬಹುದು. ಆದರೆ ಈ ಧರ್ಮದ ಧಾರ್ಮಿಕ ನಿರ್ಮಾಣಗಳು ಶಾತವಾಹನ, ಚುಟು, ಇಕ್ಷ್ವಾಕು, ಅಭೀರ ಅರಸು ಮನೆತನಗಳ ಆಳ್ವಿಕೆಯ ಕಾಲದಿಂದೀಚೆಗೆ ಕಂಡುಬರುತ್ತವೆ. ಬನವಾಸಿ ಕದಂಬರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರು, ಹೊಯ್ಸಳರು, ವಿಜಯನಗರದ ಅರಸರ ಆಶ್ರಯ ಪ್ರೋತ್ಸಾಹದಡಿಯಲ್ಲಿ ಈ ಧರ್ಮದ ದೇವಾಲಯಗಳ ನಿರ್ಮಾಣ ಪರಂಪರೆ ಅವಿಚ್ಛನ್ನವಾಗಿ ಬೆಳೆದು ಬಂದಿದೆ.[೯]

### ಕಲ್ಲೇಶ್ವರ ದೇವಾಲಯ

**ತಳವಿನ್ಯಾಸ :-** ಈ ದೇವಾಲಯದ ಸಭಾಮಂಟಪದಲ್ಲಿರುವ ಕಲ್ಯಾಣ ಚಾಲುಕ್ಯ ಅರಸ ತ್ರಿಭುವನಮಲ್ಲನ ಕಾಲದ ಕ್ರಿಶ ೧೦೮೩ರ ಶಾಸನದಲ್ಲಿ ಅಮ್ಮಳೆಯ ಪಶುಪತಿಭಟ್ಟನ ವಂಶಸ್ಥ ಭೋಗದೇವನ ಮಗನಾಸ ಶಿವರಾಜನು ಕಲಿದೇವರ ದೇವಾಲಯವನ್ನು ಕಟ್ಟಿಸಿ ಭೂದಾನ ಮಾಡಿದನೆಂದು ಉಲ್ಲೇಖಿಸುತ್ತದೆ.[೧೦] ಈ ದೇವಾಲಯವು ಕಲ್ಯಾಣ ಚಾಲುಕ್ಯ ಶೈಲಿಯಲ್ಲಿದೆ. ಕಪ್ಪು ಮಿಶ್ರಿತ ನೀಲಿಛಾಯಿಯ ನಾರುಗಲ್ಲಿನಲ್ಲಿ ನಿರ್ಮಿಸಿರುವ ಈ ದೇವಾಲಯವು ಗರ್ಭಗೃಹ, ಅಂತರಳ ಹಾಗೂ ಸಭಾ ಮಂಟಪವನ್ನು ಹೊಂದಿದೆ

**ಗರ್ಭಗೃಹ :-** ಈ ದೇವಾಲಯ ಗರ್ಭಗೃಹವು ಚಚೌಕಾಕಾರವಾಗಿದ್ದು. ಇದು ೨.೯೦ ಮೀಟರ ಉದ್ದ ಮತ್ತು ೨.೯೦ ಮೀಟರ ಅಗಲವನ್ನು ಹೊಂದಿದೆ. ಇದರ ಮಧ್ಯದಲ್ಲಿ ಶಿವಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಇದನ್ನು ಎದುರಾಗಿ ನಂದಿ ಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದೆ. ಭುವನೇಶ್ವರಿಯು ಅಷ್ಟಕೋನಕಾರದಲ್ಲಿದ್ದು ಮಧ್ಯದಲ್ಲಿ ಅರಳದ ಪುಷ್ಪವಿದೆ. ಇದರ ಪ್ರವೇಶದ್ವಾರವು ವಜ್ರಾಕಾರದ ಕೆತ್ತನೆ ಹೂ-ಬಳ್ಳಿ ನೃತ್ಯಗಾರ್ತಿಯರು ಮಿಥುನ ಶಿಲ್ಪಗಳನ್ನೊಳಗೊಂಡು ಐದು ಶಾಖೆಗಳಲ್ಲಿದೆ. ಮೊದಲಿನ ಎರಡು ಶಾಖೆಗಳು ಮೇಲ್ಭಾಗದ ಉತ್ತರಾಂಗದ ಪಟ್ಟಿಕೆಯಲ್ಲಿ ಮುಂದುವರೆದಿವೆ ಲಲಾಟ ಬಿಂಬದಲ್ಲಿ ಗಜಲಕ್ಷ್ಮೀ ಶಿಲ್ಪವಿದೆ. ಇಕ್ಕೆಲಗಳಲ್ಲಿ ಬಲ ಐದು ಮತ್ತು ಎಡ ಭಾಗದಲ್ಲಿ ಐದು ದ್ವಾರಪಾಲಕರ ತ್ರಿಶೂಲ,ಡಮರು, ಗದೆ ಮತ್ತು ಅಭಯ ಹಸ್ತಮುದ್ರೆಗಳನ್ನು ಹಿಡಿದು ನಿಂತಿರುವ ವಿಗ್ರಹಗಳು ಇವೆ. ಹೊಸ್ತಿಲ ಮುಂಭಾಗದಲ್ಲಿ ಸೌಂದರ್ಯಯುತ್ತ ಅಲಂಕೃತವಾದ ಚಂದ್ರಶಿಲಾ ಕೂಡಿಸಲಾಗಿದೆ. ಇಂದಿಗೂ ನೋಡುಗರನ್ನು ಬೇರಗು ಮುಡಿಸುವಂತಿದೆ.

**ಅಂತರಾಳ** :- ಈ ದೇವಾಲಯದ ಅಂತರಾಳವು ೩.೧೦ ಮೀಟರ ಉದ್ದ ಮತ್ತು ೩.೧೦ ಮೀಟರ ಅಗಲವನ್ನು ಹೊಂದಿದೆ ಇದರಲ್ಲಿ ಎರಡು ವಿಡಿ ಗಣಪತಿ ಶಿಲ್ಪಗಳನ್ನು ಮತ್ತು ತೃಟಿತವಾದ ದೇವಿಯ ಶಿಲ್ಪವನ್ನು ಅಂತರಾಳದ ಬಲಗೋಡೆಗೆ ಒರಗಿಸಿ ಇಡಲಗಿದೆ. ಇದರ ಪ್ರವೇಶದ್ವಾರವು ವಜ್ರಾಕಾರದ ಕೆತ್ತನೆ ಹೂ-ಬಳ್ಳಿಗಳು ನೃತ್ಯಗಾರ್ತಿಯರು ಹಾಗೂ ಸಿಂಹದ ಸಾಲುಗಳನ್ನು ಹೊಂದಿದ ನಾಲ್ಕು ಶಾಖೆಗಳಿವೆ. ಇಲ್ಲಿಯು ಮೊದಲಿನ ಎರಡು ಶಾಖೆಗಳು ಮೇಲ್ಭಾಗದ ಉತ್ತರಾಂಗದ ಪಟ್ಟಿಕೆಯಲ್ಲಿ ಮುಂದುವರೆದಿವೆ. ಪ್ರವೇಶದ್ವಾರದ ಪಾರ್ಶ್ವಗಳಲ್ಲಿ ಜಾಲಂಧರಗಳು, ಇದರ ಮೇಲ್ಭಾಗ ಬ್ರಹ್ಮ, ಶಿವ, ವಿಷ್ಣು ಹಾಗೂ ದಿಕ್ಪಾಲಕರು ತ್ರಿಶೂಲ, ಡಮರು, ಗದೆ ಮತ್ತು ಅಭಯ ಹಸ್ತಮುದ್ರೆಯನ್ನು ಹಿಡಿದು ನಿಂತಿರುವ ಉಬ್ಬು ಶಿಲ್ಪಗಳಿವೆ.

**ತೆರೆದ ಸಭಾ ಮಂಟಪ** :- ತೆರೆದ ಸಭಾ ಮಂಟಪವು ೧೨.೮೦ ಮೀಟರ್ ಉದ್ದ ಮತ್ತು ೧೭.೫೦ ಮೀಟರ್ ಅಗಲವನ್ನು ಹೊಂದಿದೆ. ಇದರಲ್ಲಿ ಒಟ್ಟು ನಲವತ್ತಾರು ಕಂಬಗಳಿದ್ದು, ಅವುಗಳಲ್ಲಿ ನಲವತ್ತೆರಡು ಸ್ವತಂತ್ರ ಕಂಬಗಳು ಮತ್ತು ನಾಲ್ಕು ಅರ್ಧಗಂಬಗಳು ಅಂತರಾಳದ ಭಿತ್ತಿಯಲ್ಲಿವೆ. ಅವುಗಳಲ್ಲಿನ ಮಧ್ಯದ ನಾಲ್ಕು ಕಂಬಗಳು ಕೆಳಗೆ ಚೌಕಾಕಾರ ಮೇಲೆ ವೃತ್ತಾಕಾರದಲ್ಲಿವೆ. ಚೌಕ ಮುಖಗಳಲ್ಲಿ ಅರ್ಧಗಂಬ, ತೋರಣ, ಶಖರ ಪಟ್ಟಿದೆ ಮತ್ತು ಕೀರ್ತಿ ಮುಖಗಳಿಂದ ಅಲಂಕರಿಸಿದ ಕೊಷ್ಟಕಗಳಲ್ಲಿ ಬ್ರಹ್ಮ, ವಿಷ್ಣು, ಸೂರ್ಯ, ಕೇಶವ, ಗಣೇಶ, ಸರಸ್ವತಿ ಮೊದಲಾದ ಉಬ್ಬು ಶಿಲ್ಪಗಳನ್ನು ಕೆತ್ತಲಾಗಿದೆ. ಸುತ್ತಲಿರುವ ಕಕ್ಷಾಸನಕ್ಕೂ ಕೆಳಗೆ ಚೌಕಾಕಾರ ಮೇಲೆ ವೃತ್ತಾಕಾರಗಳಲ್ಲಿರುವ ಕಂಬಗಳನ್ನು ಜೋಡಿಸಲಾಗಿದೆ ಸಭಾ ಮಂಟಪಕ್ಕೆ ಪೂರ್ವ, ಉತ್ತರ ಹಾಗೂ ದಕ್ಷಿಣ ಭಾಗಗಳಲ್ಲಿ ಪ್ರವೇಶಗಳಿವೆ. ಅದರ ಗೋಡೆಯ ಮೇಲಿರುವ ಪಟ್ಟಿಕೆಯಲ್ಲಿ ಬ್ರಹ್ಮ, ವಿಷ್ಣು, ಕೇಶವ, ಸೂರ್ಯ, ಸರಸ್ವತಿ ಹಾಗೂ ಗಣೇಶನ ಉಬ್ಬುಶಿಲ್ಪಗಳಿವೆ ಇವುಗಳ ಮಧ್ಯದ ಅಂಕಣದಲ್ಲಿನ ಭುವನೇಶ್ವರಿಯು ಅರಳಿದ ಕಮಲ ಅದರ ಮಧ್ಯದಲ್ಲಿ ಮೊಗ್ಗು ಮತ್ತು ಇನ್ನಿತ್ತರ ಪುಷ್ಪಗಳ ಉಬ್ಬುಕೆತ್ತನೆಯನ್ನು ಒಳಗೊಂಡಿದೆ.

ದೇವಾಲಯದ ಅಧಿಷ್ಠಾನವು ಉಪಾನ, ಜಗತಿ, ಪದ್ಮ, ಕುಮುದ, ಕಪೋತ, ಗಳ ಮತ್ತು ಹಿಂದೆ ಬಾಗಿದ ಪದ್ಮಗಳಂದಲೂ ದಂತ ಪಟ್ಟಿಕೆಯನ್ನೊಳಗೊಂಡಿದೆ. ಕೀರ್ತಿಮುಖಗಳಿಂದ ಅಲಂಕರಿಸಿದ್ದು, ಅದರಲ್ಲಿ ಮಕರ, ಸಿಂಹ, ಸ್ತ್ರೀ-ಪುರುಷರ ಉಬ್ಬುಶಿಲ್ಪಗಳನ್ನು ಕೆತ್ತಲಾಗಿದೆ. ಗರ್ಭಗೃಹದ ಹೊರ ಭಿತ್ತಿಯ ಸುತ್ತಲೂ ದೇವ ಕೋಷ್ಟಕಗಳಿವೆ. ಅವು ಅರ್ಧಗಂಬ, ಕೀರ್ತಿಮುಖ ಹಾಗೂ ಮಕರ ತೋರಣಗಳಿಂದ ಅಲಂಕೃತಗೊಂಡು ಮೇಲೆರುತ್ತ ಕಪೋತ ಭಾಗವನ್ನು ತಲುಪಿವೆ ಗೋಡೆಗಳಲ್ಲಿ ಆನೆಗಳು, ಯಕ್ಷರು, ಹಾರಾಡುವ ಗಂಧರ್ವರು, ಹೂ-ಬಳ್ಳಿಗಳು, ನೃತ್ಯಗಾರ್ತಿಯರು ಹಾಗೂ ಬೈರವನ ಉಬ್ಬುಶಿಲ್ಪಗಳಿವೆ. ಅಂತರಾಳದ ಹೊರ ಭಾಗದ ದಕ್ಷಿಣ ಗೋಡೆಯ ಅರ್ಧಗಂಬದಲ್ಲಿ ಅಲಂಕಾರಿಕವಾದ ಸುಂದರ ನಟರಾಜನ ಉಬ್ಬುಶಿಲ್ಪವಿದೆ. ದೇವಾಲಯದ ಶಿಖರವನ್ನು ಜೀರ್ಣೋದ್ಧಾರ ಗೊಳಿಸಲಾಗಿದೆ.[೧೧]

## ರಾಮಲಿಂಗೇಶ್ವರ ದೇವಾಲಯ

**ತಲವಿನ್ಯಾಸ** :- ಗ್ರಾಮದ ವಾಯ್ಯುಯ ದಿಕ್ಕಿನ ಎತ್ತರದ ದಿಬ್ಬದ ಮೇಲಿರುವ ಈ ದೇವಾಲಯ. ಕ್ರಿ.ಶ.ಸು. ೧೨ನೇಯ ಶತಮಾನದ ಈ ದೇವಾಲಯವು ಕಲ್ಯಾಣ ಚಾಲುಕ್ಯ ಶೈಲಿಯಲ್ಲಿದೆ.[೧೨] ಕಪ್ಪು ಮಿಶ್ರಿತ ನೀಲಿಛಾಯೆಯ ಸಾರುಗಲ್ಲಿಯಲ್ಲಿ ನಿರ್ಮಿಸಲಾಗಿದ್ದು,

ದಕ್ಷಿಣಾಭಿಮುಖವಾಗಿದೆ. ಇದು ಗರ್ಭಗೃಹ, ಅಂತರಾಳ ಹಾಗೂ ಸಭಾಮಂಟಪಗಳಿಂದ ಕೂಡಿದೆ. ಪ್ರಸ್ತುತ ಗರ್ಭಗೃಹ ಮತ್ತ ಅಂತರಾಳಗಳು ಮಾತ್ರ ಗೋಚರಿಸುತ್ತದೆ.

**ಗರ್ಭಗೃಹ** : ಈ ದೇವಾಲಯದ ಗರ್ಭಗೃಹವು, ನಾಲ್ಕು ಕಂಬಗಳಿಂದ ಚಚ್ಚೌಕಾಕಾರವಾಗಿದ್ದು, ಇದು ೨.೩೦ ಮೀಟರ್ ಉದ್ದ ಮತ್ತು ೨.೩೦ ಮೀಟರ್ ಅಗಲವನ್ನು ಹೊಂದಿದೆ. ಇದರ ಮಧ್ಯದಲ್ಲಿ ಶಿವಲಿಂಗವನ್ನು ೨.೧೦ ಅಡಿ ಉದ್ದ, ೨.೧೧ ಅಡಿ ಅಗಲ, ಪ್ರತಿಷ್ಠಾಪಿಸಲಾಗಿದೆ. ಮೇಲ್ಚಾವಣಿಯು ಅಷ್ಟಕೋನಾಕಾರಗಳಲ್ಲಿ ಎಂಟು ಚಿಕ್ಕ ಚಿಕ್ಕ ಕಮಲಗಳಿದ್ದು, ಮಧ್ಯಭಾಗದಲ್ಲಿ ಮಾತ್ರ ದೊಡ್ಡ ಕಮಲವನ್ನು ಹೊಂದಿದೆ. ಪ್ರವೇಶದ್ವಾರವು ರತ್ನ, ಲತಾ, ಅರ್ಧಗಂಬ, ಸುರುಳಿಯಾಕಾರದ ಅಲಂಕರಣೆ ಮತ್ತು ಪುಷ್ಪದಳ ಹೀಗೆ ಐದು ಶಾಖೆಗಳಿಂದ ಅಲಂಕರಿಸಲ್ಪಟ್ಟಿದ್ದು, ಲಲಾಟಬಿಂಬದಲ್ಲಿ ಗಜಲಕ್ಷ್ಮೀ ಶಿಲ್ಪವಿದೆ. ಗಜಲಕ್ಷ್ಮಿಯ ಬಲ ಹಾಗೂ ಎಡ ಭಾಗದಲ್ಲಿ ನಾಗ-ನಾಗಿಣಿಯರ ಶಿಲ್ಪವಿದೆ. ಇಕ್ಕೆಲಗಳಲ್ಲಿ ದ್ವಾರಪಾಲಕರು ತ್ರಿಶೂಲ, ಡಮರು, ಗದೆ ಮತ್ತು ಅಭಯ ಹಸ್ತಮುದ್ರೆಗಳನ್ನು ಹಿಡಿದು ನಿಂತಿರುವ ವಿಗ್ರಹಗಳನ್ನು ಕೆತ್ತಲಾಗಿದೆ.

**ಸಭಾಮಂಟಪ** : ಸಭಾಮಂಟಪವನ್ನು ಇತ್ತೀಚೆಗೆ ಜೀರ್ಣೋದ್ಧಾರಗೊಳಿಸಲಾಗಿದೆ. ಇದು ೨.೩೦ ಮೀಟರ್ ಉದ್ದ ಮತ್ತು ೨.೩೦ ಮೀಟರ್ ಅಗಲವನ್ನು ಹೊಂದಿದೆ. ಇದರಲ್ಲಿ ಕಲ್ಯಾಣ ಚಾಲುಕ್ಯರ ಕಾಲದ ನಾಲ್ಕು ಕಂಬಗಳನ್ನು ಮಾತ್ರ ಉಳಿಸಿಕೊಂಡು ಇನ್ನೊಳಿದಂತೆ ದೇವಾಲಯದ ಮೂಲ ರೂಪವನ್ನು ಬದಲಾಯಿಸಲಾಗಿದೆ.[೧೩] ಈ ನಾಲ್ಕು ಕಂಬಗಳಲ್ಲಿ ಎರಡು ವಿಧದ ಕಂಬಗಳನ್ನು ಕಾಣಗಹುದಾಗಿದೆ. ಮೊದಲನೆಯ ವಿಧದ ಕಂಬಗಳ ಕಾಡ ಭಾಗಗಳು ಚಚ್ಚೌಕಾಕಾರವಾಗಿದ್ದು, ಮಧ್ಯ ಎಂಟು-ಹದಿನಾರು ಭಾಗಗಳುಳ್ಳದ್ದಾಗಿದ್ದು, ಮೇಲ್ಭಾಗದಲ್ಲಿ ವೃತ್ತಾಕಾರದ ಬೋದಿಗೆ ಮತ್ತು ಚರ್ತುಮುಖ ಬೋದಿಗೆಯು ಇದ್ದು, ಮೇಲೆ ತೊಲೆಗಳಿಂದ ನಿರ್ಮಾಣವಾಗಿದೆ. ಈ ಕಂಬದಲ್ಲಿ ಹೂ-ಬಳ್ಳಿಯಿಂದ ಅಲಂಕಾರಗೊಂಡಿದೆ, ತೊಲೆಗಳ ಭಾಗದಲ್ಲಿ ಸಣ್ಣ ಸಣ್ಣ ಅರಳಿದ ಕಮಲದ ಹೂವುಗಳನ್ನು ಕೆತ್ತಲಾಗಿದೆ. ಎರಡನೆಯ ವಿಧದ ಕಂಬಗಳು ಗಂಟೆಯಾಕಾರದಲ್ಲಿವೆ. ನುಣುಪುಳ್ಳ ಈ ಕಂಬಗಳನ್ನು ಒಂದು ಅಡಿಗಿಂತಲೂ ಚಿಕ್ಕದಾದ ಚಚ್ಚೌಕಾಕಾರದ ಪೀಠದ ಮೇಲೆ ನಿಲ್ಲಿಸಲಾಗಿದೆ.

## ೪.೧.೩ ವೈಷ್ಣವ ದೇವಾಲಯಗಳು

ಭಾರತೀಯ ಪ್ರಾಚೀನ ಧರ್ಮಗಳಲ್ಲಿ ವೈಷ್ಣವ ಧರ್ಮವೂ ಒಂದು. ಇದರ ಪ್ರಾರಂಭದ ಉಲ್ಲೇಖಗಳನ್ನು ವೈದಿಕ ಸಾಹಿತ್ಯದಲ್ಲಿ ನೋಡಬಹುದು. ನಂತರ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಸಾಂಬ ಮತ್ತು ಅನಿರುದ್ಧರೆನ್ನುವ ಪಂಚ ವೀರರು ಇದರ ಅನುಯಾಯಿಗಳು ಆಗಿದ್ದರಿಂದ ಇವರ ಆರಾಧನೆಯನ್ನು "ವೀರವಾದ" ಎಂದು ಕರೆಯಲಾಗುತ್ತದೆ. ಈ ವಾದದ ಪ್ರಕಾರ ವಾಸುದೇವನೇ ಶ್ರೇಷ್ಠ ಸಂಕರ್ಷಣ, ಪ್ರದ್ಯುಮ್ನ, ಮತ್ತು ಅನಿರುದ್ಧರು ಒಬ್ಬರಾದ ನಂತರ ಮತ್ತೊಬ್ಬರು ವಾಸುದೇವನಿಂದ ಅವಿರ್ಭವಿಸಿದ್ದರು. ಸುಮಾರು ಕ್ರಿ. ಪೂ. ನಾಲ್ಕನೇ ಶತಮಾನದ ವೇಳೆಗೆ ಮಥುರಾ ಪ್ರದೇಶದ ಜನರು ವಾಸುದೇವ ಅಥವಾ ಶ್ರೀಕೃಷ್ಣನ ಪೂಜೆಯನ್ನು ಮಾಡುತ್ತಿದ್ದರೆಂದು ಗ್ರೀಕ್ ರಾಯಭಾರಿ ಮೆಗಾಸ್ತನೀಸ್ ಮತ್ತು ಪಾಣಿಯರು ಅಭಿಪ್ರಾಯ ಪಟ್ಟಿದ್ದಾರೆ.

## ಆಂಜನೇಯ ದೇವಾಲಯ

**ತಲವಿನ್ಯಾಸ :-** ಗ್ರಾಮದ ಮಧ್ಯದಲ್ಲಿರುವ ಈ ದೇವಾಲಯ, ಸಂಪೂರ್ಣ ಜೀರ್ಣೋದ್ಧಾರವಾಗಿ. ಕ್ರಿ.ಶ.ಸು. ೧೨ನೇ ಶತಮಾನದ ಈ ದೇವಾಲಯವು ಕಲ್ಯಾಣ ಚಾಲುಕ್ಯ ಶೈಲಿಯಲ್ಲಿದೆ, ಮೊದಲು ನರಸಿಂಹದೇವರ ದೇವಾಲಯವಾಗಿತ್ತು ನಂತರ ವಿಜಯನಗರ ಅರಸರ ಕಾಲದಲ್ಲಿ ಆಂಜನೇಯನ ದೇವಾಲಯವಾಗಿ ನಿರ್ಮಿಸಲಾಯಿತ್ತು ಈ ದೇವಾಲಯವು ದಕ್ಷಿಣಾಭಿಮುಖವಾಗಿದರು ಆಂಜನೇಯನು ಪೂರ್ವ ದಿಕ್ಕಿನ ಕಡೆಗೆ ಮುಖಮಾಡಿದ್ದಾನೆ. ಇದರ ಪ್ರವೇಶದ್ವಾರವು ಸಾದಾಕೆತ್ತನೆಯಿರುವುದು ಅಲ್ಲಿರುವ ಅವಶೇಷಗಳಿಂದ ತಿಳಿದುಬರುತ್ತದೆ. ಇದು ಗರ್ಭಗೃಹ ಹಾಗೂ ಸಭಾಮಂಟಪಗಳಿಂದ ಕೂಡಿದೆ. ಪ್ರಸ್ತುತ ಇತ್ತಿಚ್ಚಿನ ಗರ್ಭಗೃಹ ಮತ್ತು ಸಭಾಮಂಟಪ ಮಾತ್ರ ಗೋಚರಿಸುತ್ತದೆ.

**ಗರ್ಭಗೃಹ** : ಈ ದೇವಾಲಯವು ಸಂಪೂರ್ಣ ಜೀರ್ಣೋದ್ಧಾರವಾಗಿದ್ದು, ಗರ್ಭಗೃಹವು ಚಚೌಕಾರವಾಗಿದೆ. ಗರ್ಭಗೃಹದಲ್ಲಿ ಆಂಜನೇಯನ ಉಬ್ಬುಶಿಲ್ಪವಿದ್ದು, ಕಪ್ಪು ಮಿಶ್ರಿತ ಬಳಪದ ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಈ ಶಿಲ್ಪದ ಹಿಂದೆ ಗರುಡ ಸ್ತಂಭವಿದೆ, ಇದಕ್ಕೆ ಒರಗಿಸಿ ಈ ಶಿಲ್ಪವನ್ನು ಇಡಲಾಗಿದೆ. ಹಾಗೂ ಗರ್ಭಗುಡಿಯ ಸುತ್ತ ಪ್ರದಕ್ಷಣೆ ಪತವಿದೆ. ಈ ಶಿಲ್ಪವು ವೀರಾಸನದಲ್ಲಿದ್ದು, ದ್ವಿಬಾಹು, ಬಲಗೈ ಅಭಯಹಸ್ತ ಎಡಗೈಯಲ್ಲಿ ಹೂವಿನ ಗೊಂಚಲನ್ನು ಹಿಡಿದುಕೊಂಡಿದ್ದು ಸೊಂಟದ ಮೇಲಿಟ್ಟಿದ್ದಾನೆ. ಪಾದದ ಕೆಳಗೆ ಹೂ-ಬಳ್ಳಿಯಿಂದ ಅಲಂಕಾರ ಗೊಂಡಿದ್ದು, ಕಿವಿಯಲ್ಲಿ ಕರ್ಣಕುಂಡಲ, ಕಂಠಹಾರ, ಯಜ್ಞೋಪವೀತ ಜಪಮಾಲೆ, ಉದರ ಬಂಧ, ಕಠೀಸೂತ್ರ, ತೋಳು ಬಂಧಿ, ಕೈಕಡಗ, ಕಾಲ್ಕಡಗ, ಜಡೆಮುಕ್ಕುಟಧಾರಿಯಾಗಿದ್ದು, ಜನಿವಾರ ಧರಿಸಿದ್ದಾನೆ. ದ್ವಾರ ಬಾಗಿಲವಾಡವು ಹೂ-ಬಳ್ಳಿಯಿಂದ ಅಲಂಕಾರಿಸಿದ್ದು, ಕಾಡ ಕಲ್ಲಿನಲ್ಲಿ ಕಂಡರಿಸಲಾಗಿದೆ. ಈ ಗರ್ಭಗುಡಿಯ ಮೇಲೆ ಗೋಪುರವಿದೆ, ಇದರ ಸುತ್ತ ದೇವರುಗಳ ಮೂರ್ತಿಗಳಿವೆ, ಕಳಾಸವಿದೆ.

**ತೆರೆದ ಸಭಾ ಮಂಟಪ :-** ತೆರೆದ ಸಭಾ ಮಂಟಪವು ವಿಶಾಲವಾಗಿದೆ, ಒಟ್ಟು ಎಂಟು ಕಂಬಗಳಿದ್ದು, ಅವುಗಳಲ್ಲಿ ನಾಲ್ಕು ಕಂಬಗಳು ಭಿತ್ತಿಯಲ್ಲಿವೆ. ಅವುಗಳಲ್ಲಿನ ಮಧ್ಯದ ನಾಲ್ಕು ಕಂಬಗಳಲ್ಲಿ, ಮಧ್ಯದಲ್ಲಿ ಕಮಲದ ಹೂವಿನಿಂದ ಅಲಂಕಾರವಾಗಿದೆ. ಪ್ರಸ್ತರದ ಮೇಲೆ ಆಧುನಿಕ ಕಾಲದ ಆಂಜನೇಯನ ಉಬ್ಬುಶಿಲ್ಪವಿದೆ, ತನ್ನ ಭುಜದ ಮೇಲೆ ರಾಮ ಮತ್ತು ಲಕ್ಷಣರನ್ನು ಎತ್ತಿರುವುದು ತಿಳಿಯುತ್ತದೆ. ಇದರ ಬಲ, ಎಡ ಭಾಗದಲ್ಲಿ ದ್ವಾರಪಾಲಕರು ಹಸೀನರಾಗಿದ್ದಾರೆ. ಈ ದೇವಾಲಯದ ಮುಂದೆ, ಗರುಡ ಸ್ತಂಭವಿದೆ ಆದರ ಪಕ್ಕದಲ್ಲಿ ನವಗ್ರಹಗಳ ಮಂಟಪವಿದೆ.

**ಮಹಾದ್ವಾರ ಬಾಗಿಲು** : ಆಂಜನೇಯ ದೇವಾಲಯದ ಮುಂದೇ ದಕ್ಷಿಣಾಭಿಮುಖವಾಗಿ ಇದೆ, ಈ ಮಹಾದ್ವಾರ ಬಾಗಿಲು ಇತ್ತಿಚ್ಚಿನ ದಿನಗಳಲ್ಲಿ ಕಟ್ಟಿಸಿರುವಂತಹದ್ದು. ಬಾಗಿಲವಾಡದ ಕಂಬದ ಮೇಲೆ ಹೂ-ಬಳ್ಳಿ ಮಧ್ಯದಲ್ಲಿ ಗಣೇಶ ಮೂರ್ತಿ ಇದೆ. ಇಕ್ಕೆಲಗಳಲ್ಲಿ ದ್ವಾರಪಾಲಕ ಉಬ್ಬುಶಿಲ್ಪ, ಗೋಡೆಗಳ ಮೇಲೆ ಕಮಲ ಹೂಗಳಲ್ಲಿ ಸ್ವಾಗತವನ್ನು ಕೋರುವ ಸೇವಕರನ್ನು ಕೆತ್ತಲಾಗಿದೆ. ಒಳಭಾಗದಲ್ಲಿ ಗೂಡುಗಳನ್ನು ಮಾಡಿ, ವಿಶ್ರಾಂತಿಗಾಗಿ ಕುರಲು ಹಾಸುಕಲ್ಲುಗಳನ್ನು ಹಾಕಲಾಗಿದೆ. ಮಹಾದ್ವಾರ ಬಾಗಿಲಿನ ಮೇಲೆ ಗುಡಿನಲ್ಲಿ ರಾಮ, ಸೀತೆ, ಲಕ್ಷ್ಮಣ ಮತ್ತು ಆಂಜನೇಯನ ಮೂರ್ತಿ ಇವೆ, ಅಕ್ಕ-ಪಕ್ಕದಲ್ಲಿ ಶಂಖ ಮತ್ತು ಚಕ್ರಗಳಿವೆ.

ಈ ದೇವಾಲಯದ ಸುತ್ತ ತಡೆಗೋಡೆಯ ಬಲಭಾಗದಲ್ಲಿ ಶಾಸನ ವೀರಗಲ್ಲು ಮತ್ತು ವೀರಗಲ್ಲು ಶಿಲ್ಪಗಳಿವೆ.

## ಹೊಸಹಳ್ಳಿ ತೋಟದ ಆಂಜನೇಯ



ಅಂಬಳಿ ಗ್ರಾಮದ ನೈರುತ್ಯ ದಿಕ್ಕಿಗೆ, ಇರುವ ಈ ಹಾಳುರು ಸುಮಾರು ೨ ಕಿ.ಮೀ. ದೂರದಲ್ಲಿದೆ. ಎಚ್.ಎಂ. ನೀಲಕಂಠಯ್ಯನವರ ಹೊಲದಲ್ಲಿದೆ. ಇಲ್ಲಿ ಆಂಜನೇಯ ಉಬ್ಬುಶಿಲ್ಪವಿದೆ, ದೇವಾಲಯವು ಸಂಪೂರ್ಣ ನಶಿಸಿಹೋಗಿದ್ದು, ಕ್ರಿ.ಶ.ಸು. ೧೬-೧೭ನೇ ಶತಮಾನದ ವಿಜಯನಗರೋತ್ತರ ಕಾಲದಾಗಿದೆ, ಈ ದೇವಾಲಯವು ದಕ್ಷಿಣಾಭಿಮುಖವಾಗಿದ್ದರು ಆಂಜನೇಯನ ಮುಖವು ಪೂರ್ವ ದಿಕ್ಕಿನ ಕಡೆಗೆ ಮುಖಮಾಡಿದೆ. ಈ ಶಿಲ್ಪವು ವೀರಾಸನದಲ್ಲಿದ್ದು, ದ್ವಿಬಾಹು, ಬಲಗೈ ಅಭಯಹಸ್ತ ಎಡಗೈಯಲ್ಲಿ ಹೂವಿನ ಗೊಂಚಲನ್ನು ಹಿಡಿದುಕೊಂಡಿದ್ದು ಸೊಂಟದ ಮೇಲಿಟ್ಟಿದ್ದಾನೆ. ಪಾದದ ಕೆಳಗೆ ಹೂ-ಬಳ್ಳಿಯಿಂದ ಅಲಂಕಾರ ಗೊಂಡಿದ್ದು, ಕಿವಿಯಲ್ಲಿ ಕರ್ಣಕುಂಡಲ, ಕಂಠಹಾರ, ಯಜ್ಞೋಪವೀತ ಜಪಮಾಲೆ, ಉದರ ಬಂಧ, ಕಠೀಸೂತ್ರ, ತೋಳು ಬಂಧಿ, ಕೈಕಡಗ, ಕಾಲ್ಕಡಗ, ಜಟಾಮುಕುಟಧಾರಿಯಾಗಿದ್ದು, ಜನಿವಾರ ಧರಿಸಿದ್ದಾನೆ.



ಇದೆ ಊರಿನಲ್ಲಿ ಶಿವಲಿಂಗ ಗುಡಿಯಿವೆ, ಕಾಡಕಲ್ಲಿ ನಿಂದ ಗೂಡಿನ ರೀತಿಯಲ್ಲಿವೆ. ಒಳಗಡೆ ಪಾನಬಾಟಲು, ಶಿವಲಿಂಗವಿದೆ ಇದನ್ನು ಹಸಿರು ಕಪ್ಪು ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಕ್ರಿ.ಶ.ಸು. ೧೬-೧೭ನೆ ಶತಮಾನದಲ್ಲಿ ನಿರ್ಮಾಣವಾದ ಮಣ್ಣಿನ ದಿಬ್ಬದ ಮೇಲೆ ಇವೆ.

ಈ ಹೊಸಹಳ್ಳಿ ಊರಿನಲ್ಲಿ ಇಂದು ಜನವಸತಿಯಿಲ್ಲ. ಆದರೆ ಅಲ್ಲಿ ಜನರು ವಾಸವಾಗಿದ್ದರು ಎಂದು ಹೇಳಲು ಮಡಿಕೆಯ ಕುರುಹುಗಳು ಹೆಚ್ಚಿನ ರೀತಿಯಲ್ಲಿ ಸಿಗುವುದರಿಂದ ೧೬-೧೭ನೆ ಶತಮಾನದಲ್ಲಿ ಜನರು ವಾಸವಾಗಿದ್ದು, ಯಾವುದೋ ರೋಗಕ್ಕೆ ತುತ್ತಾಗಿ ಊರು ತೊರೆದು ಸುತ್ತಮುತ್ತಲಿನ ಊರುಗಳಿಗೆ ಹೋಗಿರ ಬಹುದು ಎಂದು ತಿಳಿಯುತ್ತದೆ. ಕಾರ್ತೀಕ ಮಾಸದಲ್ಲಿ ಕಾರ್ತೀಕೋತ್ಸವವನ್ನು ಆಚರಿಸುವ ಸಂದರ್ಭದಲ್ಲಿ ಸುತ್ತ ಮುತ್ತಲಿನ ಊರುಗಳಿಂದ ಜನರು ಬಂಧು ಪೂಜೆ ಮಾಡುತ್ತಾರೆ.

## ೪.೧.೬ ಶಾಕ್ತ ದೇವಾಲಯಗಳು

ಸ್ತ್ರೀ ದೇವತೆಗಳಿಗೆ ಸಂಬಂಧಿಸಿದ ದೇವಾಲಯಗಳು ನಮ್ಮ ಪ್ರಾಚೀನ ಸಂಸ್ಕೃತಿಯ ಕಾಲಾವಧಿಯಲ್ಲಿ ಕಂಡುಬರುವುದನ್ನು ಗಮನಿಸಿದ್ದೇವೆ. ಹರಪ್ಪ ಸಂಸ್ಕೃತಿಯಲ್ಲಿ ಮಾತೃದೇವತೆಗೆ ಪ್ರಮುಖ ಸ್ಥಾನವಿದ್ದುದ್ದನ್ನು ನಾವು ಇತಿಹಾಸ ಪುಟಗಳಿಂದ ನೋಡಿದ್ದೇವೆ. ಹೀಗೆ ಕ್ರಿಪೂ. ೩೦೦೦ ವರ್ಷಗಳ ಕಾಲದಲ್ಲಿ ಅಸ್ತಿತ್ವಕ್ಕೆ ಬಂದ ಮಾತೃ ದೇವತಾರಾಧನೆಯೇ ಶಾಕ್ತ ಸಂಪ್ರದಾಯದ ಮೂಲಾಧಾರ. ಹಾಗಾಗಿ ಭಾರತದ ಶಿಲ್ಪಕಲೆಯ ಇತಿಹಾಸವನ್ನು ನೋಡಿದರೆ ಹಲವು ರೀತಿಯ ಶಕಿದೇವತೆಯ ಶಿಲ್ಪಗಳು ಕಂಡುಬರುವುದನ್ನು ಕಾಣಬಹುದು. ಇವರಲ್ಲಿ ಪ್ರಮುಖವಾಗಿ ಮಹಿಷಮರ್ಧಿನಿ, ಸಪ್ತಮಾತೃಕೆಯರು, ಕಾಳಿ, ಲಕ್ಷ್ಮೀ, ಪಾರ್ವತಿ, ಸರಸ್ವತಿ ಇನ್ನು ಮುಂತಾದವರನ್ನು ನೋಡುತ್ತೇವೆ.

### ದುರ್ಗಾಂಭಿಕಾ ದೇವಿ ದೇವಸ್ಥಾನ

ಅಂಬಳಿ ಗ್ರಾಮದ ಪ್ರಸಿದ್ಧ ಗ್ರಾಮದೇವತೆ ಇದಾಗಿದೆ, ಇತ್ತೀಚಿನ ದಿನಗಳಲ್ಲಿ ಈ ದೇವರ ಗರ್ಭಗೃಹದ ಗುಡಿಯನ್ನ ಕಟ್ಟಲಾಗಿದೆ. ದುರ್ಗಾಂಭೀಕಾ ದೇವಿಯ ಮೂರ್ತಿಯನ್ನು ಕಪ್ಪು ಗ್ರಾನೈಟ್ ಕಲ್ಲಿನಿಂದ ಕೇತ್ತಲಾಗಿದೆ, ಗೋಡೆಯ ಸುತ್ತ ಕಣಶಿಲೆಯಿಂದ ಅಲಂಕಾರಿಸಿದ್ದಲ್ಲದೆ, ಗುಡಿಯ ಮುಂದಿನ ಗೋಡೆಯ ಮೇಲೆಯು ಕಣಶಿಲೆ ಹಾಕಲಾಗಿದೆ. ಇದರ ಮುಂದೆ ಶ್ರೀದೇವಿಯ ಪಾದವಿರುವ, ಪಾದಕಟ್ಟೆ ಇದೆ. ಇಲ್ಲಿ ದೇವಿಯ ಖೇಲ್(ಮಡಿಕೆ ಕುಂಭ)ಗಳಿವೆ, ಊರಿಗೆ ಬರುವ ಪ್ರತಿಯೊಬ್ಬ ವ್ಯಕ್ತಿಯು ಈ ದೇವಿಯ ಪಾದಕ್ಕೆ ಕೈಮುಗಿದು ಬಂದರೆ ದೇವಿ ಒಳ್ಳೇಯದನ್ನು ಮಾಡುವಳು ಎಂಬ ಜನರ ನಂಬಿಕೆಯಾಗಿದೆ. ಈ ದೇವಿಯ ಜಾತ್ರೆಯು ಪ್ರತಿ ವರ್ಷ ಮಾಘ ಮಾಸದಲ್ಲಿ ಊರಿನ ಎಲ್ಲಾ ಸಮುದಾಯದವರು ಸೇರಿ ಈ ಜಾತ್ರೆಯನ್ನು ಮಾಡುತ್ತಾರೆ.

### ಡೋಣಿ ಕೆಂಚಮ್ಮ ದೇವಸ್ಥಾನ

ಈ ದೇವಿಯ ದೇವಾಲಯವನ್ನು ಇತ್ತೀಚಿನ ದಿನಮಾನಗಳಲ್ಲಿ ಕಟ್ಟಲಾಗಿದೆ, ಗುಡಿಯ ಒಳಗಡೆ ಮರದ ಕಟ್ಟಿಗೆಯ ಕಂಬಗಳಿಂದ ಕಟ್ಟಿದ್ದಾರೆ. ಈ ದೇವಿಯ ಮೂರ್ತಿಯನ್ನು ಕಟ್ಟಿಗೆಯಿಂದ ಮಾಡಿರುವುದು ತಿಳಿದುಬರುತ್ತದೆ. ಈ ಊರಿನ ಜನರಿಗೆ ಮನೆಯಲ್ಲಿ ಸಮಸ್ಯೆ, ಕಷ್ಟಗಳು ಬಂದರೆ ಈ ದೇವಿಯ ಪಲ್ಲಕ್ಕಿಯನ್ನು ಮನೆಗೆ ಕೊಂಡೊಯ್ದು ಪೂಜೆ ಮಾಡಿ ತಮ್ಮ ಮನೆಯಲ್ಲಿರುವ ದವಸ ಧಾನ್ಯಗಳನ್ನು ಪಲ್ಲಕ್ಕಿಯಲ್ಲಿ ಇಟ್ಟು ಮತ್ತೆ ಆ ಪಲ್ಲಕ್ಕಿಯನ್ನು ತಂದು ದೇವಿಯ ದೇವಾಲಯದಲ್ಲಿ ಇಡುವುದರಿಂದ ತಮ್ಮಗೆ ಬಂದ ಕಷ್ಟ, ದೃಷ್ಟ ಶಕ್ತಿಗಳಿಂದ ಕಾಪಾಡುತ್ತಾಳೆ ಎಂಬುದು ಜನರ ನಂಬಿಕೆಯಾಗಿದೆ.

### ೪.೧.೭ ಇತರೆ ದೇವಾಲಯಗಳು

#### ಬಸವಣ್ಣ ದೇವಸ್ಥಾನ

ಅಂಬಳಿ ಗ್ರಾಮದಲ್ಲಿ ರೈತಾಪಿ ವರ್ಗವು ಹೆಚ್ಚು ಇರುವುದರಿಂದ ತಮ್ಮ ಎತ್ತುಗಳಿಗೆ ಯಾವುದೇ ರೋಗ-ರುಜೀನಗಳು ಬಾರದಿರಲಿ ಎಂಬ ದೃಷ್ಟಿಯಿಂದ ಈ ಬಸವಣ್ಣ ದೇವಾಲಯವನ್ನು ನಿರ್ಮಾಣ ಮಾಡಲಾಗಿದೆ. ಬಸವಣ್ಣನ ಮೂರ್ತಿಯು ಇಂದಿನ ಕಾಲದ ಕಪ್ಪು ಗ್ರಾನೈಟ್ ಕಲ್ಲಿನಲ್ಲಿ ಕಂಡರಿಸಲ್ಪಟ್ಟಿದೆ, ಹಾಗೂ ದೇವಾಲಯದ ಒಳಭಾಗದಲ್ಲಿ ಮರದ ಕಟ್ಟಿಗೆಯ ಕಂಬಗಳಿವೆ. ಹಾಗೂ ಈ ದೇವಾಲಯದ ಒಳಗಡೆ ಬಲಭಾಗದಲ್ಲಿ ಗಣಪತಿ ವಿಗ್ರಹವಿದೆ.

### ೪.೨ ಶಾಸನಗಳು

#### ಕಲ್ಲೇಶ್ವರ ದೇವಾಲಯ, ಮಂಟಪ ಎಡಭಾಗದ ಗೋಡೆಯಿಂದ ನಿಲ್ಲಿಸಲಾಗಿರುವ ಶಾಸನ

**ಶಾಸನ-೧ :** ಶಕ ೧೦೦೪ರಲ್ಲಿ ಅಂದರೆ ಚಾಲುಕ್ಯ ವಿಕ್ರಮಾದಿತ್ಯನ ೬ನೆಯ ವರ್ಷವಾದ ದುಂದುಭಿ. ಪುಷ್ಯ. ಅಮಾವಾಸ್ಯೆಗೆ ಸರಿಯಾಸ ಕ್ರಿ.ಶ. ೨೦-೧-೧೦೮೩ ಶುಕ್ರವಾರದಂದು ಚಾಲುಕ್ಯ ವಿಕ್ರಮಾದಿತ್ಯನು ಕಲ್ಯಾಣದಿಂದ ಆಳುತ್ತಿರಲಾಗಿ, ಅವನ ಸಾಮಂತ ತ್ರಿಭುವನಮಲ್ಲ

ಪಾಂಡ್ಯದೇವನು ನೊಳಂಬವಾಡಿ-೩೨೦೦೦ವನ್ನು ಆಳುತ್ತಿದ್ದಾಗ, ಗಂಗ ದುರ್ವಿನೀತನ ಕಾಲದಲ್ಲಿ ಅಮ್ಮಳೆಯಲ್ಲಿದ್ದ ಹಾಗೂ ದುರ್ವಿನೀತನಿಂದ ಸನ್ಮಾನಿತನಾದ ಪಶುಪತಿಭಟ್ಟನ ವಂಶಸ್ಥನಾದ ಭೋಗದೇವನ ಮಗನಾದ ಶಿವರಾಜನು ಅಮ್ಮಳೆ(ಇಂದಿನ ಅಂಬಳಿ) ಯಲ್ಲಿ ಕಲಿದೇವರ ದೇವಾಲಯವನ್ನು ನಿರ್ಮಿಸಿ ದಾನ ನೀಡುತ್ತಾನೆ. ಇವನ ಅನುಮತಿಯಂತೆ ಅಮ್ಮಳೆ(ಅಂಬಳಿ)ಯ ಮಹಾಜನರೂ ಭೂದಾನ ನೀಡುತ್ತಾರೆ. ಅನನ್ತಪಾಳ ದಂಡನಾಯಕನು ಅದೇ ಗ್ರಾಮದ ಧವಳಶಂಕರ ದೇವರಿಗೆ ಮತ್ತು ಕೇಶವದೇವರಿಗೆ ಸುಂಕದ ವಿನಾಯಿತಿ ನೀಡಿ ಭೂದಾನ ಮಾಡುತ್ತಾನೆ. ಶಾಸನದಲ್ಲಿ ಚಾಲುಕ್ಯ ತೈಲಪನಿಂದ ಆರನೆಯ ವಿಕ್ರಮಾದಿತ್ಯನವರೆಗೆ ವಂಶಾವಳಿ ವರ್ಣನೆಯಿದೆ. ಇದನ್ನು ಕಣ್ಡರಿಸಿದವನು ದಾಸೋಜ ಎಂದು ಉಲ್ಲೇಖವಿದೆ.[೧೪]

**ಕಲ್ಲೇಶ್ವರ ದೇವಾಲಯ, ಮಂಟಪ ಎಡಭಾಗದ ಗೋಡೆಯಿಂದ ನಿಲ್ಲಿಸಲಾಗಿರುವ ಶಾಸನ**

**ಶಾಸನ-೨** : ಚಾಲುಕ್ಯ ವಿಕ್ರಮವರ್ಷ ೩೦ನೆಯ ಪಾರ್ಥಿವ, ಪುಷ್ಯ, ಅಮಾವಾಸ್ಯೆ, ಸೋಮವಾರ, ಉತ್ತರಾಯಣಸಂಕ್ರಾಂತಿ, ಅಂದರೆ ಕ್ರಿ.ಶ. ೭-೧-೧೧೦೬ ಭಾನುವಾರ(ಸೋಮವಾರವಲ್ಲ, ಅಂದು ಉತ್ತರಾಯಣವಿರುವುದಿಲ್ಲ)ದಂದು ಚಾಲುಕ್ಯ ತ್ರಿಭುವನಮಲ್ಲನ ಕಾಲದಲ್ಲಿ ನೊಳಂಬವಾಡಿ-೩೨೦೦೦ದ ಹೆರ್ಜ್ಜುಂಕದ ಅಧಿಕಾರಿಯಾಗಿದ್ದ ಅಣುಕಪಲ್ಲವರಾಯನ ಅನುಮತಿಯಂತೆ ಕಾಳಿಮರಸ ಮತ್ತು ಕೇಶಿರಾಜರು ಅಮ್ಮಳೆ(ಅಂಬಳಿ)ಯ ಐವತ್ತು ಮಹಾಜನರ ಕಾಲನ್ನು ತೊಳೆದು ಹಿರಿಯ ಕೆರೆಯ ಜೀರ್ಣೋದ್ಧಾರಕ್ಕಾಗಿ ಎಲೆಯ ಬಳ್ಳಿಯ ಮೇಲಿನ ಸುಂಕವನ್ನು ಬಿಡುತ್ತಾರೆ ಹಾಗೂ ಭೂದಾನವನ್ನು ನೀಡುತ್ತಾರೆ ಎಂಬ ಉಲ್ಲೇಖವಿದೆ.[೧೫]

**ಆಂಜನೇಯ ದೇವಾಲಯದ ತಡೆಗೋಡೆಯಲ್ಲಿರುವ ಶಾಸನ**

**ಶಾಸನ-೩** : ಶಕ ೧೦೬೫ನೆಯ ರುಧಿರೋದ್ಗಾರಿ ಸಂವತ್ಸರದ ಪುಷ್ಯ, ಪೂರ್ಣಮಿ, ಸೋಮವಾರದುತ್ತರಾಯಣ ಸಂಕ್ರಾಂತಿ ವ್ಯತೀಪಾತ ಅಂದರೆ ಕ್ರಿಶ ೨೩-೧೨-೧೧೪೩ ಗುರುವಾರ (ಆ ದಿನ ಸೋಮವಾರವಲ್ಲ ಮತ್ತು ಉತ್ತರಾಯಣವು ಡಿಸೆಂಬರ್ ೨೫ನೇ ಶನಿವಾರವಾಗುತ್ತದೆ)ದಂದು ಚಾಲುಕ್ಯ ಇಮ್ಮಡಿ ಜಗದೇಕಮಲ್ಲನು ಕಲ್ಯಾಣದಲ್ಲಿ ಆಳ್ವಿಕೆ ಮಾಡುತ್ತಿದ್ದಾಗ ಅವನ ಸಾಮಂತ ಜಗದೇಕಮಲ್ಲ ವೀರಪಾಂಡ್ಯದೇವನು ನೊಳಂಬವಾಡಿ-೩೨೦೦೦ವನ್ನು ಆಳುತ್ತಿದ್ದ. ಆಗ ಕದಂಬ ವಂಶದ ಘಟ್ಟಿದೇವನ ಮಗ ಚಿಬಿದೇವರಸ ಕೊಟ್ಟೂರಿನಲ್ಲಿದ್ದು ಅಮ್ಮಳೆ(ಅಂಬಳಿ)ಯಲ್ಲಿ ಜ್ಞಾನಪ್ರಕಾಶಭಟ್ಟಾರಕರು ಮಾಡಿಸಿದ ನರಸಿಂಹದೇವರಿಗೆ ಭೂದಾನ ಮಾಡಿದ ಉಲ್ಲೇಖವಿದೆ.[೧೬]

**ಕಲ್ಲೇಶ್ವರ ದೇವಾಲಯ, ಮುಂದಿನ ಮಂಟಪ ತೊಲೆಯಲ್ಲಿನ ಶಾಸನ**

**ಶಾಸನ-೪** : ಪರಿಧಾವಿಸಂವತ್ಸರದ ಆಶ್ವಯುಜಮಾಸದಲ್ಲಿ ಕದಂಬವಂಶದ ಜಗದಳಪಾಂಡ್ಯನು ೪೦೦ ಕಮ್ಮ ಭೂಮಿಯನ್ನು ಅಮ್ಮಳೆ(ಅಂಬಳಿ)ಯ ಕಲಿದೇವರಿಗೆ ಬಿಡುತ್ತಾನೆ. ಶಾಸನವು ಕಾವ್ಯಮಯವಾಗಿದೆ. ಈ ಶಾಸನವನ್ನು ಕೆತ್ತಿದವನು ಬಸವೋಜನ ಮಗ ಕೇತೋಜ ಎಂದು ಉಲ್ಲೇಖವಿದೆ.[೧೭]

**ಆಂಜನೇಯ ದೇವಾಲಯದ ಆವರಣದ ಗೋಡೆಯಲ್ಲಿರುವ ಶಾಸನ**

**ಶಾಸನ-೫ :** ನಾಗಶಿಲ್ಪದ ಕಲ್ಲಿನ ಮೇಲೆ ಕ್ರಿ.ಶ. ೧೧೪೩ರ ನರಸಿಂಹ ದೇವರು ಎಂಬ ಉಲ್ಲೇಖ ಬರುತ್ತದೆ. ಇದು ನರಸಿಂಹ ದೇವರ ಹೆಸರಿನಲ್ಲಿ ದೇವಾಲಯ ನಿರ್ಮಾಣವಾಗಿ,

## ಶಾಸನ ಉಲ್ಲೇಖಿತ ಸಾಂಸ್ಕೃತಿಕ ಅಂಶಗಳು

ಶಾಸನಗಳು ಚರಿತ್ರೆಯ ನೈಜ ಆಕರಗಳಾಗಿದ್ದು, ಅವು ನೀಡುವ ಮಾಹಿತಿ ಅತ್ಯಮೂಲ್ಯವಾಗಿವೆ. ಇಲ್ಲಿ ಆಳ್ವಿಕೆ ಮಾಡಿದ ವಿವಿಧ ರಾಜರು, ಅವರ ಸಾಮಂತರು, ಅಧಿಕಾರಿಗಳು ಅಯಾ ಸಂದರ್ಭಕ್ಕನುಗುಣವಾಗಿ ಹಲವಾರು ಶಾಸನಗಳನ್ನು ಹೊರಡಿಸಿದ್ದಾರೆ. ಅವುಗಳಿಂದ ನಾನಾ ಬಗೆಯ ಮಾಹಿತಿಗಳು ನಮಗೆ ಲಭ್ಯವಾಗುತ್ತವೆ. ಈಗಾಗಲೇ ಅಧ್ಯಯನ ಪ್ರದೇಶದಲ್ಲಿ ಈವರೆಗೆ ಪ್ರಕಟವಾಗಿರುವ ವಿವಿಧ ಶಾಸನಗಳನ್ನು ಮತ್ತು ಅವು ಉಲ್ಲೇಖಿಸಿದ ಮಹತ್ವದ ಸಾಂಸ್ಕೃತಿಕ ವಿವರಗಳನ್ನು ಈ ಕೆಳಕಂಡಂತೆ ವಿಶ್ಲೇಷಿಸಲಾಗಿದೆ.

### ಅಗ್ರಹಾರ

ಅಗ್ರಹಾರ ವೆಂದರೆ ಶ್ರೇಷ್ಠವಾದ ಸ್ಥಳ ಅಥವಾ ಶ್ರೇಷ್ಠರಿಗೆಂದು ಕೊಟ್ಟ ಸ್ಥಳ. ಅನೇಕ ರಾಜರು, ವಿದ್ಯಾಭಿಮಾನಿಗಳು ವಿದ್ಯಾಭಿವೃದ್ಧಿಗಾಗಿ ಅಗ್ರಹಾರಗಳನ್ನು ನಿರ್ಮಿಸಿ, ವಿದ್ಯಾ ಸಂಪನ್ನರಾದ ಬ್ರಾಹ್ಮಣರನ್ನು ನೇಮಿಸಿ, ವಿದ್ಯೆಯನ್ನು ಪ್ರಸಾರ ಮಾಡುತ್ತಿದ್ದರು. ಪ್ರಾಚೀನ ಕಾಲದಲ್ಲಿ ರಾಜ್ಯವು ವಿದ್ಯಾಭ್ಯಾಸದ ಹೊಣೆಯನ್ನು ಪ್ರತ್ಯೇಕ್ಷವಾಗಿ ವಹಿಸಿದ್ದರೂ ಅಗ್ರಹಾರಗಳನ್ನು ಸ್ಥಾಪಿಸುವುದರ ಮೂಲಕ ಪರೋಕ್ಷವಾಗಿ ಸಹಾಯ ಮಾಡಿದೆ ಎನ್ನಬಹುದು.[೧೮] ಅಗ್ರಹಾಗಗಳ ಬ್ರಾಹ್ಮಣರು ತಮ್ಮ ಗಮನವನ್ನು ವಿದ್ಯಾದಾನದ ಕಡೆಗೆ ಹರಿಸುತ್ತಿದ್ದರು. ಅಲ್ಲದೆ ಆ ಊರಿನ ಸಂಪೂರ್ಣ ಆದಾಯವು ರಾಜಬೊಕ್ಕಸಕ್ಕೆ ಸಲ್ಲದೆ ಆ ಸಂಪತ್ತನ್ನು ಬ್ರಾಹ್ಮಣರೇ ಅನುಭವಿಸುತ್ತಿದ್ದರು.

ವಿದ್ಯಾದಾನವು ಪವಿತ್ರ ಕಾರ್ಯವಾದುದ್ದರಿಂದ ಅಗ್ರಹಾರಗಳನ್ನು ದಾನವಾಗಿ ಕೊಡುತ್ತಿದ್ದರು. ಹೀಗಾಗಿ ನಮ್ಮ ನಾಡಿನಲ್ಲಿ ಅನೇಕಾನೇಕ ಅಗ್ರಹಾರಗಳು ಉಪಸ್ಥಿತವಿದ್ದವು. ಪ್ರೋ. ಡಿ.ಎಲ್. ನರಸಿಂಹಚಾರ್ಯರ ಪ್ರಕಾರ ಅಗ್ರ + ಆಹಾರ ಎಂಬುದು ಎರಡು ಪದಗಳ ಸಮಾಸ ಅಗ್ರ ಎಂದರೆ ಶ್ರೇಷ್ಠ, ಆಹಾರ ಎಂದರೆ ದೇಶ ಅಥವಾ ಸ್ಥಳ. ಅಗ್ರಹಾರಗಳೆಂದರೆ ಶ್ರೇಷ್ಠರಿಗೆ ಕೊಟ್ಟಿರುವ ಸ್ಥಳ ಎಂದರ್ಥ ಅಗ್ರಹಾರಗಳು ವಿಶೇಷವಾಗಿ ಬ್ರಾಹ್ಮಣರನ್ನು ಮಹಾಜನರೆಂದು ಕರೆಯುತ್ತಿದ್ದರು. ಅವರು ವೇದ, ವೇದಾಂಗ, ಉಪಾಂಗಶಾಸ್ತ್ರ, ಅಷ್ಟಸಶಪುರಾಣ, ಸ್ಮೃತಿಗಳನ್ನು ಅಧ್ಯಯನ ಮಾಡಿರುತ್ತಾರೆ. ಅಲ್ಲದೆ ವಾಗ್ಭೂಷಣರು, ಷಟ್ಕರ್ಮನಿರತರು, ಪರಮ ಪರೋಪಕಾರಿಗಳು, ಆಶ್ರಿತರಿಗೆ ಕಲ್ಪವೃಕ್ಷದಂತೆ ಆಗಿರುತ್ತಾರೆ.[೧೯] ಇಲ್ಲಿ ಅಧ್ಯಯನ ಪ್ರದೇಶದಲ್ಲಿನ ಶಾಸನಗಳಲ್ಲಿ ಉಕ್ತವಾಗಿರುವ ಅಗ್ರಹಾರಗಳ ಮಾಹಿತಿಯನ್ನು ಸಂಗ್ರಹಿಸಿ ವಿಶ್ಲೇಷಿಸಲಾಗಿದೆ.

ಕ್ರಿ.ಶ ೧೧೦೬ರ ಅಂಬಳಿ[೨೦] ಶಾಸನದಲ್ಲಿ ಸುಂಕದ ಹೆಗ್ಗಡೆಗಳಾದ ಕೇಶಿರಾಜ ಮತ್ತು ಕಟಳಿಮರಸರು ಅನುಕಪಲ್ಲವರಾಯ ದಂಡನಾಯಕನ ಆಜ್ಞೆಯ ಮೇರೆಗೆ ಹಿರಿಯ ಕೆರೆಯ ದುರಸ್ತಿಗಾಗಿ ಅಮ್ಮೆಳೆಯ ಅಗ್ರಹಾರಗಳನ್ನು ದತ್ತಿಯಾಗಿ ಪಡೆದ ಬ್ರಾಹ್ಮಣರನ್ನು (ಮಹಾಜನರಿಗೆ)

ಸುಂಕದ ಆದಾಯದ ಸ್ವಲ್ಪ ಭಾಗವನ್ನು ಮತ್ತು ತೆರಿಗೆ ರಹಿತವಾದ ಭೂಮಿಯನ್ನ ದಾನ ಮಾಡಿದ್ದಲ್ಲದೆ, ಅದೇ ಉದ್ದೇಶಕ್ಕಾಗಿ ಮೊದಲು ನೀಡಿದ್ದ ದಾನವನ್ನು ಧೃಡೀಕರಿಸಿದ್ದನ್ನು ತಿಳಿಸುತ್ತದೆ. ಕ್ರಿ.ಶ. ೧೧೧೨ರ ಕೊಟ್ಟೂರು ಶಾಸನದಲ್ಲಿ ವಿದ್ಯಾರ್ಥಿಗಳ ಆಹಾರಕ್ಕೆ ಐವತ್ತು ಮತ್ತರ ಭೂವಿಯನ್ನು ದಾನ ನೀಡಿದನ್ನು ತಿಳಿಸುತ್ತದೆ. ಕ್ರಿ.ಶ. ೧೧೪೭ರ ಅಲಬೂರು ಶಾಸನದಲ್ಲಿ ಮಹಾಜನರಿಗೆ ಆಹಾರ ಮತ್ತು ಇತ್ಯಾದಿಗಳ ನಿರ್ಮಹಣೆಗಾಗಿ ಭೂದಾನ ನೀಡಿದ್ದನ್ನು ಉಲ್ಲೇಖಿಸುತ್ತದೆ. ಕ್ರಿ.ಶ. ೧೨೫೯ರ ಏಣಗಿ ಶಾಸನದಲ್ಲಿ ಶಾಸನದಲ್ಲಿ ಪೂಮಿನಪಡಂಗಿಲೆಯ ೧೨೦ ಮಹಾಜನರು ಗ್ರಾಮದ ಕುಸುಮನಾಥ ದೇವರಿಗೆ ಭೂಮಿಯನ್ನು ದಾನ ನೀಡಿದ್ದನ್ನು ದಾಖಲಿಸುತ್ತದೆ. ಪೂವಿನ ಪಡಂಗಿಲೆಯು ಕುಂತಳ ದೇಶದ ನೊಳಂಬವಾಡಿ ನಾಡಿನ ಕೋಗಳಿನಾಡಿನಲ್ಲಿತ್ತೆಂದು ತಿಳಿಸುತ್ತದೆ.

## ಕೆರೆ ನಿರ್ಮಾಣ

ಕೆರೆಗಳನ್ನು ಹಿಂದೆ ಸಾಗರ, ಸಮುದ್ರಕ್ಕೆ ಹೋಲಿಸುತ್ತಿದ್ದರು. ಇವು ಗ್ರಾಮದ ಜನ ಜಾನುವಾರುಗಳಿಗೆ, ವ್ಯವಸಾಯಕ್ಕೆ. ನಿತ್ಯದ ಹಲವಾರು ಚಟುವಟಿಕೆಗಳಿಗೆ ಉಪಯುಕ್ತವಾಗಿದ್ದು, ಈ ರೀತಿಯ ಕೆರೆಗಳನ್ನು ನಿರ್ಮಿಸುವುದರಿಂದ ಅಂತರ್ ಜಲ ಹೆಚ್ಚುವುದು ಎಂಬ ಕಾರಣದಿಂದಲೂ ಪ್ರತಿ ಗ್ರಾಮಗಳಲ್ಲಿ ಒಂದು ಕೆರೆಯನ್ನು ಸಾಮಾನ್ಯವಾಗಿ ನಿರ್ಮಿಸುತ್ತಿದ್ದುದನ್ನು ಕಾಣುತ್ತೇವೆ. ಅಧ್ಯಯನ ಪ್ರದೇಶದಲ್ಲಿನ ವಿವಿಧೆಡೆ ದೊರೆಯುವ ಕೆಲ ಶಾಸನಗಳು ಬೇರೆ ಬೇರೆ ವಿಷಯಗಳನ್ನು ತಿಳಿಸುವಂತೆ ಶಾಸನೋಲ್ಲೇಖಿತ ಕೆರೆ ಮತ್ತು ಬಾವಿಗಳ ಕುರಿತು ಇಲ್ಲಿ ವಿಶ್ಲೇಷಿಸಲಾಗಿದೆ.

ಕ್ರಿ.ಶ. ೧೧೦೬ರ ಅಂಬಳಿ[೨೧] ಶಾಸನದಲ್ಲಿ ಸುಂಕದ ಹೆಗ್ಗಡೆಗಳಾದ ಕೇಶಿರಾಜ ಮತ್ತು ಕಾಳಿಮರಸರು ಅನುಕಪಲ್ಲವರಾಯ-ದಂಡನಾಯಕನ ಆಜ್ಞೇಯ ಮೇರೆಗೆ ಹಿರಿಯ ಕೆರೆಯ ದುರಸ್ತಿಗಾಗಿ ಅಮ್ಮೆಳೆಯ ಮಹಾಜನರಿಗೆ ಸುಂಕದ ಆದಾಯದ ಸ್ವಲ್ಪ ಭಾಗವನ್ನು ಮತ್ತು ತೆರಿಗೆ ರಹಿತವಾದ ಭೂಮಿಯನ್ನು ದಾನ ಮಾಡಿದ್ದನ್ನು ತಿಳಿಸುತ್ತದೆ.

ಈ ಅಂಬಳಿ ಗ್ರಾಮದ ಉತ್ತರ ದಿಕ್ಕಿನಲ್ಲಿರುವ ಕೆ.ಕೋಡಿಹಳ್ಳಿ ಗ್ರಾಮದ ಈ ಶಾನ್ಯ ದಿಕ್ಕಿನಲ್ಲಿ ಕೆರೆ ಇತ್ತು. ಹಾಗಾಗಿ ಕೆರೆಯ ಕೋಡಿಯಲ್ಲಿ ಇರುವ ಊರು ಕೋಡಿಹಳ್ಳಿ ಎಂಬ ಹೆಸರು ಬಂದಿದೆ. ಈ ಕೆರೆಯ ದುರಸ್ಥಿಗಾಗಿ, ಸುಂಕವನ್ನು ಸಂಗ್ರಹಿಸುವ ಅಧಿಕಾರಿಗಳಾದ ಕೇಶಿರಾಜ ಮತ್ತು ಕಾಳಿಮರಸರು ಅನುಕಪಲ್ಲವರಾ ದಂಡನಾಯಕನ ಆಜ್ಞೇಯ ಮೇರೆಗೆ, ಅಂಬಳಿಯ ಐವತ್ತು ಬ್ರಾಹ್ಮಣರ ಕಾಲನ್ನು ತೋಳೆದು ದೊಡ್ಡ ಕೆರೆಯ ಜಿರ್ಣೋದ್ಧಾರಕ್ಕಾಗಿ ಎಲೆಯ ಬಳ್ಳಿಯ ಮೇಲಿನ ತೆರಿಗೆಯನ್ನು ರದ್ದು ಪಡಿಸುತ್ತಾನೆ, ಮತ್ತು ತೆರಿಗೆ ರಹಿತವಾದ ಭೂಮಿಯನ್ನು ದಾನ ಮಾಡಿದ್ದನ್ನು ಉಲ್ಲೇಖಿಸುತ್ತದೆ. ಇಂದಿನ ಕೆ.ಕೋಡಿಹಳ್ಳಿ ಕೆರೆಯಲ್ಲಿ ಮಳೆ ನೀರು ಸಂಗ್ರಹ ಕಡಿಮೆಯಾದಂತೆ ಅಲ್ಲಿಯ ಜನರು ಕೆರೆಯನ್ನು ಆಕ್ರಮಿಸಿ ಸಾಗುವಳಿ ಭೂಮಿಯಾಗಿ ತಮ್ಮ ಹೆಸರಿನಲ್ಲಿ ಮಾಡಿಕೊಂಡಿದ್ದು, ಕೆರೆಯು ಸಂಪೂರ್ಣ ನಶಿಸಿ ಹೋಗಿದೆ. ಆದರೆ ಕೆರೆಯ ಏರಿ ಮಾತ್ರ ಹೊಲದ ಮೇರೆಯಾಗಿ ಉಳಿದಿದೆ.

**ವಂಶಾವಳಿಗಳು**

ಅಧ್ಯಯನ ಪ್ರದೇಶದಲ್ಲಿನ ಶಾಸನಗಳಲ್ಲಿ ಆಯಾ ಕಾಲದ ಅರಸರ ದೀರ್ಘವಾದ ವಂಶಾವಳಿ ನೀಡಿರುವುದನ್ನ ಕಾಣುತ್ತೇವೆ. ಅವುಗಳನ್ನು ಈ ಮುಂದಿನಂತರ ವಿಶ್ಲೇಷಿಸಲಾಗಿದೆ.

ಕ್ರಿ.ಶ. ೧೦೮೩ರ ಅಂಬಳಿ[೨೨] ಮತ್ತು ಕ್ರಿಶ ೧೦೮೫ರ ಹ್ಯಾಳ್ಯಾ ಶಾಸನಗಳಲ್ಲಿ ಚಾಲುಕ್ಯರ ತೈಲಪಸಿಂದ ಆರನೆಯ ವಿಕ್ರಮಾದಿತ್ಯನವರೆಗೆ ವಂಶಾವಳಿಯನ್ನು ತಿಳಿಸುತ್ತದೆ. ಇವುಗಳಲ್ಲಿ ಚಾಲಿಕ್ಯ ದೊರೆ ತ್ರೈಲೋಕ್ಯಮಲ್ಲದೇವನ ಮಂಶಾವಳಿ ಹೀಗಿದೆ. ತೈಲಪ, ಆತನಮಗ ಸತ್ಯಾಶ್ರಯ, ಅವನ ಮಕ್ಕಳು ವಿಕ್ರಮ, ಅಯ್ಯಣ ಮತ್ತು ಜಯಸಿಂಹ, ಜಯಸಿಂಹನ ಮಗ ಆಹವಮಲ್ಲದೇವ, ಆತನ ಮಕ್ಕಳು ಸೋಮ ಮತ್ತು ಗಂಗಪೆರ್ಮ್ಮಾಡಿ ವಿಕ್ರಮಾದಿತ್ಯನೆಂದು ಉಲ್ಲೇಖಿಸುತ್ತದೆ. ಕ್ರಿ.ಶ. ೧೫೪೪ರ ಮಗಿಮಾವಿನಹಳ್ಳಿ ಶಾಸನದಲ್ಲಿ ವಿಜಯನಗರ ಸಾಮ್ರಾಜ್ಯದ ಸದಾಶಿವರಾಯನ ಅಧಿಕಾರಿಯಾದ ಬಯಕಾರ ರಾಮಪ್ಪಯ್ಯನ ವಂಶಾವಳಿಯನ್ನು ನೀಡಿದ್ದು ಅದರಂತೆ ಕೊಂಡವೀಟಿಯ ಸಿಂಗಯ ಇವನ ಮಗ ಭಾವಯ ಮಂತ್ರಿ, ಇವನ ಮಗ ರಾಮಮಂತ್ರಿ, ಇವನ ಪತ್ನಿ ತೆಲಗಮಾಂಬ, ಇವರ ಮಗ ಪೆದ್ದತಿಮ್ಮಯ್ಯ, ಪತ್ನಿ ಲಕ್ಕಾಂಬಿಕ. ಇವರ ಮಗನೇ ರಾಮಪ್ಪಯ್ಯ ಎಂದು ತಿಳಿಸುತ್ತದೆ.

**ಬಿರುದು ಬಾವಲಿಗಳು**

ಅಧ್ಯಯನ ಪ್ರದೇಶದಲ್ಲಿನ ಶಾಸನಗಳಲ್ಲಿ ಆಯಾ ಕಾಲದ ಅರಸರ ಶ್ರೇಷ್ಠತೆಯನ್ನು ಗುರುತಿಸಿಕೊಳ್ಳಲು ತಮ್ಮನ್ನು ಸೂರ್ಯ ಇಲ್ಲವೇ ಚಂದ್ರವಂಶೀಯರು ಎಂದು ಗುರುತಿಸಿಕೊಂಡು ಅವರ ಬಿರುದು ಬಾವಲಿಗಳನ್ನು ದಾಖಲಿಸಿರುವುದನ್ನು ಕಾಣಬಹುದು. ಅವುಗಳನ್ನು ಈ ಮುಂದಿನಂತೆ ವಿಶ್ಲೇಷಿಸಲಾಗಿದೆ.

ಕ್ರಿ.ಶ. ೧೨೨೩ರ ಕೋಗಳಿ[೨೩] ಶಾಸನದಲ್ಲಿ ಹೊಯ್ಸಳರ ಮನೆತನದ ನರಸಿಂಹದೇವನನನ್ನು ಕೊಂಡಾಡಿದೆ. ದ್ವಾರವತಿ ಪುರವರಾಧೀಶ್ವರ, ಯಾದವ ಕುಳಾಂಬರ, ಸಮ್ಯಕ್ತ ಚೂಡಾಮಣಿ, ಮಲೆರಾಜರಾಜ, ಮಲೆಪರೊಳ್ಗಂಡ, ಕದನ ಪ್ರಚಂಡ, ಶನಿವಾರ ಸಿದ್ಧಿ, ಗಿರಿದುರ್ಗಮಲ್ಲ ಎಂಬ ಬಿರುದುಗಳಿಂದ ಕೊಂಡಾಡಿದೆ. ಇವನ ಕಾಲದಲ್ಲಿ ಸೋಮದಂಡ ನಾಯಕನು ಮಹಾಪ್ರಧಾನನಾಗಿದ್ದಾಗ ಸೋಮನಾಥದೇವರ ಪೂಜೆಗಾಗಿ ಅಂದರೆ ಅಂಗಭೋಗ, ರಂಗಭೋಗ, ನಂದಾದೀವಿಗೆ, ನೈವೇದ್ಯ, ಜೀರ್ಣೋದ್ಧಾರಕ್ಕೆ ಭೂಮಿಯನ್ನು ದಾನ ಮಾಡುತ್ತಾನೆ. ಹಾಗೆಯೇ ಇದನ್ನು ನೋಡಿಕೊಳ್ಳುವುದಕ್ಕೆ ಪಾಸ್ವಾಗ ಗುರುಗಳ ಪುತ್ರರಾದ ಸೋಮಜ್ಜೀಯವರನ್ನು ನೇಮಿಸುವರು. ಹಾಗೆಯೇ ಈ ಶಾಸನವನ್ನು ಕಾಪಾಡಿಕೊಂಡು ಬರಬೇಕೆಂದು ತಿಳಿಸುತ್ತಾರೆ. ಅದು ಇಂತಿದೆ, ಈ ದಾನವನ್ನು ತೊಂಬತ್ತಾರು ಸಾವಿರದ ಸೆಟ್ಟಿಗುತ್ತರು, ನಕರರು, ಮುಮ್ಮರಿದಂಡಂಗಳು ಹಾಗೂ ಸಮಸ್ತ ಪ್ರಜೆಗಳು ಪ್ರತಿಪಾಲಿಸಬೇಕೆಂದು ಆದೇಶವನ್ನು ಮಾಡುತ್ತಾನೆ.

## ಮಾನ್ಯದ ಉಲ್ಲೇಖಗಳು

ಪ್ರಾಚೀನ ಕಾಲದಲ್ಲಿ ಕೆಲವು ಕಾರಣಗಳಿಗಾಗಿ ಮಾನ್ಯಗಳನ್ನು ಬಿಡುತ್ತಿದ್ದರು. ಅದು ಅಂದು ಅವರ ಶ್ರೇಷ್ಠತೆಯ ಪ್ರತೀಕವಾಗಿತ್ತು. ಮಾನ್ಯವನ್ನ ಅಂದು ಯಾವುದಾದರು ಸೇವೆ ಅಥವಾ ಶ್ರೇಷ್ಠ ಕೆಲಸ ಮಾಡಿದ ವ್ಯಕ್ತಿಯನ್ನು ದೇವಾಲಯ ಇಲ್ಲವೇ ಮಠದಂತಹ ಸಾಮಾಜಿಕ ಸಂಸ್ಥೆಗಳ ಸೇವೆಯನ್ನು ಗುರುತಿಸಿ ಮಾನ್ಯಗಳನ್ನು ಬಿಡಲಾಗುತ್ತಿತ್ತು. ಅಧಯಯನ ಪ್ರದೇಶದಲ್ಲಿನ ವಿವಿಧೆಡೆಯಲ್ಲಿ ದೊರೆಯುವ ಶಾಸನಗಳು ಬೇರೆ ಬೇರೆ ವಿಷಯಗಳನ್ನು ತಿಳಿಸುವಂತೆ ಅಂದಿನ ಮಾನ್ಯಗಳನ್ನು ಪೂರಕವಾಗಿ ಉಲ್ಲೇಖಿಸಿವೆ.

ಕ್ರಿ.ಶ. ೧೧೦೬ರ ಅಂಬಳಿ[೨೪] ಶಾಸನದಲ್ಲಿ ಸುಂಕದ ಹೆಗ್ಗಡೆಗಳಾದ ಕೇಶಿರಾಜ ಮತ್ತು ಕಾಳಿಮರಸರು ಅನುಕಪಲ್ಲವರಾಯ-ದಂಡನಾಯಕನ ಆಜ್ಞೆಯ ಮೇರೆಗೆ ಹಿರಿಯ ಕೆರೆಯ ದುರಸ್ತಿಗಾಗಿ ಅಮ್ಮೆಳೆಯ ಮಹಾಜನರಿಗೆ ಸುಂಕದ ಆದಾಯದ ಸ್ವಲ್ಪ ಭಾಗವನ್ನು ಮಾನ್ಯ ಮಾಡಲಾಯಿತು ಎಂದು ಉಲ್ಲೇಖಿಸುತ್ತದೆ. ಕ್ರಿ.ಶ. ೧೧೧೧ರ ಹನಸಿ ಶಾಸನದಲ್ಲಿ ತ್ರಿಭುವನಪಾಂಡ್ಯನ ಮಹಾಸಾಮಂತ ಹೊಳೆಯನು ಕೋಗಳಿ-೫೦೦ರ ಒಳಗಿನ ಹನಸೆಯ ಪರಶುರಾಮೇಶ್ವರ ದೇವರ ಅಂಗಭೋಗ, ನೈವೇದ್ಯಕ್ಕೆ ತಪೋಧನರ ಮತ್ತು ವಿದ್ಯಾರ್ಥಿಗಳ ಊಟಕ್ಕೆ ಭೂಮಿ ಮತ್ತು ಸುಂಕದ ಒಂದು ಭಾಗವನ್ನು ಮಾನ್ಯ ಮಾಡಿದನೆಂದು ತಿಳಿಸುತ್ತದೆ. ಕ್ರಿ.ಶ. ೧೫೪೪ರ ಕೊಟ್ಟೂರು ಶಾಸನದಲ್ಲಿ ಮಹಾಮಂಡಳೇಶ್ವರ ರಾಮರಾಜನು ಕೊಟ್ಟೂರು ಸೀಮೆಯ ನಾವಿದರಿಗೆ ತೆರಿಗೆ ವಿನಾಯಿತಿಯನ್ನು ಮಾನ್ಯ ಮಾಡಿದ್ದನ್ನು ಉಲ್ಲೇಖಿಸುತ್ತದೆ.

ಕ್ರಿ.ಶ. ೧೫೪೦ರ ಕೊಟ್ಟೂರು ಶಾಸನದಲ್ಲಿ ಬಾಗಳಿಯ ಮಾಚೆನಾಯಕನ ಮಗನಾದ ವಾದಿನಾಯಕನು ಕೊಟ್ಟೂರು ಸೀವೆಯ ಕುರುಬರಿಗೆ ಕುರಿಗಳ ಮೇಲಿನ ತೆರಿಗೆಯ ವಿನಾಯಿತಿಯನ್ನು ಮಾನ್ಯ ಮಾಡಿದ್ದನ್ನು ಉಲ್ಲೇಖಿಸುತ್ತದೆ.

## ಸುಂಕ ಮತ್ತು ತೆರಿಗೆ

ಸುಂಕ ಮತ್ತು ತೆರಿಗೆಗಳು ರಾಜ್ಯವೊಂದರ ಆದಾಯದ ಪ್ರಮುಖ ಮೂಲಗಳಾಗಿರುತ್ತವೆ. ಸಮಾಜದಲ್ಲಿ ಜನರು ಮತ್ತು ಇತರೆ ಸಂಸ್ಥೆಗಳು ನೀಡುತ್ತಿದ್ದ ಸುಂಕ ಮತ್ತು ತೆರಿಗೆಗಳು ಮತ್ತು ಅವುಗಳ ಪ್ರಮಾಣವನ್ನು ವಿಧಿವತ್ತಾಗಿ ನೀಡಿದ/ನೀಡುತ್ತಿದ್ದ ಇಲ್ಲವೇ ಅಂತಹವುಗಳನ್ನು ಸಮಾಜದ ಒಂದು ಒಳ್ಳೆಯ ಉದ್ದೇಶಕ್ಕೆ ವಿನಾಯತಿ ನೀಡಿದ ವಿವರಗಳು ಅಧ್ಯಯನ ಪ್ರದೇಶದಲ್ಲಿನ ವಿವಿಧೆಡೆ ದೊರೆಯುವ ಶಾಸನಗಳು ಉಲ್ಲೇಖಿಸಿರುವುದನ್ನು ತಿಳಿಯಬಹುದು.

ಕ್ರಿ.ಶ. ೧೦೮೩ರ ಅಂಬಳಿ[೨೫] ಶಾಸನದಲ್ಲಿ ಅಮ್ಮೆಳೆಯಲ್ಲಿ ಕಲಿದೇವರ ದೇವಾಲಯವನ್ನು ಕಟ್ಟಿಸಿದ್ದನ್ನು ತಿಳಿಸುತ್ತದೆ. ಇದೇ ಊರಿನ ಮಹಾಜನರು ದೇವರ ಸೇವೆಗೆ ಭೂಮಿದಾನ ನೀಡಿದರು. ದಂಡನಾಯಕ ಪನ್ನಾಯದ ಅಧಿಷ್ಠಾಯಕ ಅನಂತಪಾಲಯ್ಯನು ಸುಂಕದ ಸ್ವಲ್ಪ ಭಾಗವನ್ನು ಮತ್ತು ಭೂಮಿಯನ್ನು ಅದೇ ಊರಿನ ಕಲಿದೇವ, ಧವಳಶಂಕರದೇವ ಮತ್ತು ಕೇಶವದೇವರ ಸೇವೆಗೆ ದಾನ ಮಾಡಿದ್ದನ್ನು ತಿಳಿಸುತ್ತದೆ.

ಕ್ರಿ.ಶ. ೧೧೦೬ರ ಅಂಬಳಿ[೨೬] ಶಾಸನದಲ್ಲಿ ಸುಂಕದ ಹೆಗ್ಗಡೆಗಳಾದ ಕೇಶಿರಾಜ ಮತ್ತು ಕಾಳಿಮರಸರು ಅನುಕಪಲ್ಲವರಾ ದಂಡನಾಯಕನ ಆಜ್ಞೆಯ ಮೇರೆಗೆ ಪಿರಿಯ ಕೆರೆಯ ದುರಸ್ತಿಗಾಗಿ ಅಮ್ಮೆಳೆಯ ಮಹಾಜನರಿಗೆ ಸುಂಕದ ಆದಾಯದ ಸ್ವಲ್ಪ ಭಾಗವನ್ನು ಮತ್ತು ತೆರಿಗೆ ರಹಿತವಾದ ಭೂಮಿಯನ್ನು ದಾನ ಮಾಡಿದ್ದನ್ನು ಉಲ್ಲೇಖಿಸುತ್ತದೆ.

**ಅಳತೆ ಮತ್ತು ಮಾಪನ**

ಪುರಾತನ ಕಾಲದಿಂದ ಮಾನವನು ತಮ್ಮ ದಿನನಿತ್ಯದ ವ್ಯವಹಾರಕ್ಕಾಗಿ ತಮ್ಮದೇ ಆದ ವಿಧಾನಗಳನ್ನು ಅನುಸರಿಸಿ ಅಳತೆ ಮತ್ತು ಮಾಪನಗಳನ್ನು ಮಾಡಿಕೊಂಡಿದ್ದರು. ದೇಶದ ಆಯಾ ಭಾಗಗಳಿಗೆ ಆಯಾ ಊರುಗಳಿಗೆ ಅಳತೆ ಮತ್ತು ಮಾಪನಗಳು ರಾಜನು ನಿರ್ಧರಿಸುತ್ತಿದ್ದನು. ನಂತರ ಮೂಲ ಮಾಪನದ ಅಳತೆಯನ್ನು ಆಯಾ ಭಾಗದವರು ಅಥವಾ ಆಡಳಿತ ವ್ಯವಸ್ಥೆಯವರು ನಿಗದಿ ಮಾಡುತ್ತಿದ್ದರು. ಈ ಮಾಪನಗಳು ಎಲ್ಲಾ ಕಾಲದಲ್ಲಿ ಒಂದೇ ಆಗಿರಲಿಲ್ಲ. ಹೊಲಗಳ ಅಳತೆಗಾಗಿ ಬಳಸುತ್ತಿದ್ದ ಮಾಪನವು ಕೋಲು ಆಗಿರುತ್ತಿತ್ತು. ಈ ಅಳತೆ ಕೋಲುಗಳ ಸಹಾಯದಿಂದ ಹೊಲಗಳನ್ನು 'ಮತ್ತರು' ಮತ್ತು 'ಕಮ್ಮ' (ಕಂಬ)ಗಳೆಂಬುದಾಗಿ ಅಳೆಯುತ್ತಿದ್ದರು. ಕಮ್ಮ ಕನಿಷ್ಠ ಮಾಪನ, ಮತ್ತರು ಗರಿಷ್ಠ ಮಾಪನವಾಗಿರುತ್ತಿತ್ತು.[೨೭]

ಕ್ರಿ.ಶ. ೧೧ನೆಯ ಶತಮಾನದ ಅಂಬಳಿ[೨೮] ಶಾಸನದಲ್ಲಿ ಕದಂಬವಂಶದ ಜಗದಳಪಾಂಡ್ಯನು ೪೦೦ ಕಮ್ಮ ಭೂಮಿಯನ್ನು ಅಮ್ಮಳೆ(ಅಂಬಳಿ)ಯ ಕಲಿದೇವರಿಗೆ ದಾನ ನೀಡುತ್ತಾನೆಂದು ತಿಳಿಸುತ್ತದೆ.

**ಮಹಾಜನರು**

ಮಹಾಜನರು ಅಂದಿನ ಸಮಾಜದಲ್ಲಿ ಅಗ್ರಸ್ಥಾನ ಪಡೆದಿದ್ದರು ಎಂದು ಅಂಬಳಿ ಪರಿಸರದಲ್ಲಿ ಬರುವ ಶಾಸನಗಳಲ್ಲಿ ಕಂಡುಬರುತ್ತದೆ. ಇವರು ಪ್ರತಿಯೊಂದು ಕಾರ್ಯಗಳ ಮುಂದಾಳತ್ವವನ್ನು ವಹಿಸುತ್ತಿದ್ದರು. ಇವರು ಯೋಗವನ್ನು ಮಾಡಿಸುವುದು, ಓದುವುದು, ಓದಿಸುವುದು, ದಾನ ನೀಡುವುದು, ಸ್ವೀಕರಿಸುವುದು ಇವರ ಕೆಲಸಗಳಾಗಿದ್ದವು. ಇವುಗಳ ಜೊತೆಗೆ ಬೇರೆ ಬೇರೆ ಜವಾಬ್ದಾರಿಯನ್ನು ವಹಿಸಿಕೊಂಡಿದ್ದರೆಂದು ತಿಳಿಯುತ್ತದೆ. ದೇವಾಲಯಗಳಿಗೆ ನೀಡಿದ ದಾನ ಸರಿಯಾಗಿ ನಿರ್ವಹಣೆಯಾಗುವಂತೆ ನೋಡಿಕೊಳ್ಳುವುದು ದೇವಾಲಯದಲ್ಲಿ ನಡೆಯುವ, ಯಜ್ಞ, ಯಾಗ, ಉತ್ಸವ, ಆಚರಣೆಗಳನ್ನು ಗಮನಿಸುವುದು ಒಂದು ವೇಳೆ ಆಚರಣೆಯಲ್ಲಿ ಲೋಪ ದೋಷಗಳು ಕಂಡು ಬಂದರೆ ಕೂಡಲೇ ಆಸ್ಥಾನದಿಂದ ಪದಚ್ಯುತಿಗೊಳಿಸಿ ಬೇರೆಯವರನ್ನು ಆಯ್ಕೆ ಮಾಡುವುದು, ಕೆರೆಗಳನ್ನು ಕಟ್ಟಿ ಭೂಮಿಗಳಿಗೆ ನೀರುಣಿಸುವ ಕೆಲಸಗಳು ಮಾಡುತ್ತಿದ್ದರು. ಕೆರೆ ಹಾಗೂ ಅವುಗಳಿಗೆ ಜೀರ್ಣೋದ್ಧಾರ ಮಾಡಿಸುವುದು ಈ ಮಹಾಜನರ ಕೆಲಸವಾಗಿತ್ತು.

ನೊಳಂಬವಾಡಿ-೩೨೦೦೦ರ ಆಡಳಿತದಲ್ಲಿ ನಿರ್ಮಿಸಿದ ಶಾಸನದಲ್ಲಿ ಮಹಾಜನರನ್ನು ಈ ರೀತಿಯಲ್ಲಿ ವರ್ಣಿಸಿದ್ದಾರೆ. ಆ ಗ್ರಾಮದ ಮಹಾಜನಗಳು ಯಮ, ನಿಯಮ, ಸ್ವಾಧ್ಯಾಯ, ಧ್ಯಾನ, ಧಾರಣ, ಮೌನ, ಅನುಷ್ಠಾನ ಜಪ, ಸಮಾಧಿ, ಶೀಲಗುಣ, ಸಂಪನ್ನರೂ, ಸಜ್ಜನರೂ, ನಾಲ್ಕು ಸಮುದ್ರಗಳಿಂದ ಸುತ್ತುವರಿದ, ಭೂಮಿಯಲ್ಲೆಲ್ಲಾ ಪ್ರಸಿದ್ಧರೂ, ದ್ವಿಜ ವಂಶದಲ್ಲೆ ಪ್ರಸಿದ್ಧರೂ

ಮೀಮಾಂಸವೆಂಬ ಸರೋವರದಲ್ಲಿ ವಿಹರಿಸುವ ರಾಜ ಹಂಸರೂ ಚತುರ್ವೇದ, ವೇದಾಂಗ, ಹದಿನೆಂಟು ಪುರಾಣಗಳು, ಸ್ಮೃತಿಗಳು ಇನ್ನು ಅನೇಕ ಶಾಸ್ತ್ರ ಸಾಹಿತ್ಯಗಳಲ್ಲಿ ಪಾರಂಗತರೂ ಪಂಚ ಮಹಾಯಜ್ಞಗಳ ಕಾರ್ಯದಲ್ಲಿ ನಿರತರೂ ಆರು ಕರ್ಮದಲ್ಲಿ ನಿರತರೂ ಏಳು ಸೋಮ ಸಂಸ್ಥಾನಗಳ ಅವಭೃತ ಸ್ನಾನಗಳಿಂದ ಪವಿತ್ರಗೊಳಿಸಲ್ಪಟ್ಟ ಶರೀರ ಉಳ್ಳವರೂ, ಅಷ್ಟಾಂಗ ಯೋಗದ ಪ್ರಯೋಗವನ್ನು ಬಲ್ಲವರೂ ಒಂಭತ್ತು ಸೂತ್ರಗಳಿಂದ ವಿರಾಜಮಾನವಾದ, ವಕ್ಷಸ್ಥಳ ಉಳ್ಳವರು, ಹತ್ತು ದಿಕ್ಕುಗಳನ್ನು ಬೆಳಗಿಸುವಂತಹ ಯಶಸ್ಸುಳ್ಳವರೂ. ಹದಿನಾಲ್ಕು ವಿದ್ಯೆಗಳಲ್ಲಿ ಪಾರಂಗತರೂ, ೩೨೦೦೦ ವಿಷಯ(ಪ್ರದೇಶ)ಗಳಲ್ಲಿ ಅಗ್ರಗಣ್ಯರು, ಅನವರತವಾಗಿ ಪುಣ್ಯವನ್ನು ಸಂಪಾದಿಸಿದವರೂ ಇತ್ಯಾದಿ ಪ್ರಶಸ್ತಿಗಳನ್ನು ಪಡೆದವರು ಬ್ರಾಹ್ಮಣರಾಗಿದ್ದುದನ್ನು ಶಾಸನಗಳಲ್ಲಿ ಕಾಣಬಹುದಾಗಿದೆ.

ಮಹಾಜನರು ಪಂಡಿತರು, ಶಾಸ್ತ್ರಜ್ಞ ಪರಿಜ್ಞಾನಿಗಳಾಗಿರುವುದರಿಂದ ಅವರಿಗೆ ಅಪಾರವಾದ ಗೌರವವು ಇತ್ತು. ಈ ಮೂಲಕ ಅವರು ಎಲ್ಲ ಕ್ಷೇತ್ರಗಳಲ್ಲಿಯೂ ಅಗ್ರಮಾನ್ಯರಾಗಿದ್ದರು ಅದಕ್ಕಾಗಿ ಇವರಿಗೆ ಅರಸರು, ಅಧಿಕಾರಿಗಳು ಮತ್ತು ಇತರೆ ಗ್ರಾಮಜನರು, ಅನೇಕ ದಾನ-ದತ್ತಿಗಳನ್ನು ನೀಡಿರುವುದು ತಿಳಿದುಬರುತ್ತವೆ.

### ೪.೩ ಮೂರ್ತಿಶಿಲ್ಪಗಳು

ದೇವಾಲಯವನ್ನು ನಿರ್ಮಿಸಿದರೆ ಅಲ್ಲಿ ಮೂರ್ತಿಶಿಲ್ಪ ಇರಲೇಬೇಕು. ದೇವರ ಆಲಯವು ಹಲವಾರು ರೀತಿಯ ಪೂಜೆ-ಪುನಸ್ಕಾರಗಳು, ಹಬ್ಬಗಳು, ಜಾತ್ರೆಗಳು, ಉತ್ಸವಗಳು ಸಮಾಜದ ಜನಸಾಮಾನ್ಯರ ಮೇಲೆ ಪ್ರಭಾವವನ್ನು ಬೀರಿವೆ. ವಾಸ್ತುಶಿಲ್ಪ ಮತು ಮೂರ್ತಿಶಿಲ್ಪಕ್ಕೆ ಅವಿನಾಭಾವ ಸಂಬಂಧವಿರುವುದನ್ನು ನಾವು ನೋಡಬಹುದು. ವಾಸ್ತುಶಿಲ್ಪದ ಜೊತೆಯಲ್ಲಿಯೇ ಮೂರ್ತಿಶಿಲ್ಪವೂ ಬೆಳೆದುಬಂದಿದೆ ಎನ್ನುವುದು ಹಲವು ವಿದ್ವಾಂಸರ ವಾದ. ಆದರೆ ವಾಸ್ತುಶಿಲ್ಪಕ್ಕಿಂತಲೂ ಮೂರ್ತಿಶಿಲ್ಪಕ್ಕೆ ಪ್ರಾಚೀನವಾದ ಇತಿಹಾಸವಿದೆ. ವಾಸ್ತುಶಿಲ್ಪವು ದೇವರುಗಳಿಗೆ ಆಲಯದಂತಿದ್ದರೆ, ಮೂರ್ತಿಶಿಲ್ಪ ಸಾಕ್ಷಾತ್ ದೇವರಿಗೆ ಮೂರ್ತಿ ಸ್ವರೂಪವನ್ನು ನೀಡಿದೆ.[೨೯]

ಶಿಲ್ಪ ಎನ್ನುವ ಮಾತು ಮೊದಲು ಬಹಳ ವ್ಯಾಪಕವಾದ ಅರ್ಥವನ್ನು ಪಡೆದ್ದಿತ್ತು. ಪ್ರಸಿದ್ಧವಾದ ೬೪ ಕಲೆಗಳಿಗೆಲ್ಲ 'ಶಿಲ್ಪ' ಎನ್ನುವ ಹೆಸರು ಅನ್ವಯವಾಗುತ್ತಿತ್ತು. ಮುಂದೆ ಈ ಪದದ ವ್ಯಾಪ್ತಿ ಪರಿಮಿತಿಗೊಂಡು ಶಿಲ್ಪ ಎಂದರೆ ಮೂರ್ತಿಗಳ ನಿರ್ಮಾಣ ಎಂಬ ಅರ್ಥಕ್ಕೆ ಸೀಮಿತವಾಯಿತು.[೩೦]

### ಶೈವ ಶಿಲ್ಪಗಳು

ಭಾರತೀಯ ಇತಿಹಾಸದಲ್ಲಿ ಶೈವಧರ್ಮಕ್ಕೆ ಅತ್ಯಂತ ಪ್ರಾಚೀನ ಇತಿಹಾಸವಿದೆ. ಹರಪ್ಪ ಸಂಸ್ಕೃತಿಯ ನೆಲೆಗಳಾದ ಹರಪ್ಪ, ಮೆಹೆಂಜೋದಾರೋ ಮತ್ತು ಕಾಲಿಬಂಗನ್ ಇತ್ಯಾದಿ ನೆಲೆಗಳಲ್ಲಿ ಅನೇಕ ಮುದ್ರೆಗಳು ದೊರೆತ್ತಿದ್ದು. ಅವುಗಳ ಮೇಲೆ ಪುರುಷ ದೇವತೆಗಳ ಚಿತ್ರಗಳಿವೆ. ಇವುಗಳಲ್ಲಿ ಯೋಗಮುದ್ರೆಯಲ್ಲಿ ಆಸಿನನಾಗಿರುವ ಮೂರು ಮುಖದ ಪಶುಪತಿ ಶಿವನ ಚಿತ್ರ ಪ್ರಮುಖವಾದುದು. ಬಹುಶಃ ಈ ಚಿತ್ರವೇ ಶಿವನ ಪ್ರಾಚೀನ ರೂಪವೆಂದು ಹೇಳಲಾಗುತ್ತದೆ. ಕನ್ನಡ ನಾಡಿನಲ್ಲಿ ಬಾದಾಮಿ ಚಾಲುಕ್ಯ ಮನೆತನದ ಕಾಲದಿಂದೀಚೆಗೆ ಶೈವ ಧರ್ಮವು ಉಚ್ಛ್ರಾಯ

ಸ್ಥಿತಿಯೆಡೆಗೆ ಮುನ್ನಡೆಯಿತು. ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯ, ಹೊಯ್ಸಳ. ವಿಜಯನಗರ ಮೊದಲಾದ ಮನೆತನಗಳ ಆಶ್ರಯ, ಪ್ರೋತ್ಸಾಹದ ಅಡಿಯಲ್ಲಿ ಶೈವ ಶಿಲ್ಪ ಬೆಳವಣಿಗೆಯನ್ನು ಸಮಕಾಲೀನ ಶಿಲ್ಪಾ ಅವಶೇಷಗಳಿಂದ ಕಂಡುಕೊಳ್ಳಬಹುದು. ಪ್ರಸ್ತುತ ಅಧ್ಯಯನದ ಪ್ರದೇಶದಲ್ಲಿ ಕಂಡುಬರುವ ಶೈವಮೂರ್ತಿಗಳಿಗೆ ಸಂಬಂಧಿಸಿದಂತೆ, ಶೈವದ್ವಾರಪಾಲಕ, ಗಣಪತಿ, ನಂದಿ, ಮುಂತಾದ ಮೂರ್ತಿಶಿಲ್ಪಗಳು ಕಂಡುಬರುತ್ತವೆ.[೬೧]

**ಶಿವಲಿಂಗ**

ಊರು : ಅಂಬಳಿ

ಕಾಲ : ೧೧ನೇ ಶತಮಾನ

ಸ್ಥಳ : ಕಲ್ಲೇಶ್ವರ ದೇವಾಲಯದಲ್ಲಿ

ಶಿಲೆ : ಕಪ್ಪು ಶಿಲೆ

ಈ ಕಲ್ಲೇಶ್ವರ ದೇವಾಲಯದ ಗರ್ಭಗೃಹದಲ್ಲಿ ಪಾಣಿಪೀಠದ ಮೇಲೆ ಅರ್ಧ ಅಡಿಯಷ್ಟು ಶಿವಲಿಂಗವಿದೆ. ಇದು ಕಲ್ಯಾಣಿ ಚಾಲುಕ್ಯರ ಕಾಲದ ಕಪ್ಪು ನೀಲಿಛಾಯೆ ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಶಿವಲಿಂಗವನ್ನು ಅಲಂಕೃತವಾಗಿ ಕೆತ್ತನೆ ಮಾಡದೆ ಸಧಾರಣವಾಗಿ ತೋರಿಸಿರುವುದು ಕಂಡುಬರುತ್ತದೆ.

ಊರು : ಅಂಬಳಿ

ಕಾಲ : ೧೨ನೇ ಶತಮಾನ

ಸ್ಥಳ : ರಾಮಲಿಂಗೇಶ್ವರ ದೇವಾಲಯದಲ್ಲಿ

ಶಿಲೆ : ಕಪ್ಪು ಶಿಲೆ

ಪೂರ್ವಭಿಮುಖವಾಗಿರುವ ರಾಮಲಿಂಗೇಶ್ವರ ದೇವಾಲಯವು ಕಲ್ಯಾಣಿ ಚಾಲುಕ್ಯರ ಕಾಲದಾಗಿದೆ. ಈ ಶಿವಲಿಂಗ ಶಿಲ್ಪವು ಪಾಣಿಪಿಟದ ಮೇಲೆ ಒಂದು ಅಡಿ ಎತ್ತರವಾಗಿದ್ದು ಕಪ್ಪು ನೀಲಿ ಛಾಯೆ ಶಿಲೆಯಲ್ಲಿ ಕೆತ್ತಲಾಗಿದೆ. ನೋಡಲು ತುಂಬ ಅಕರ್ಷಣೆಯವಾಗಿರುವ ಈ ದೇವಾಲಯದ ಶಿವಲಿಂಗ ಶಿಲ್ಪವು ಸಾಧರಣ ಅಲಂಕೃತವಾಗಿದೆ.

ಊರು : ಅಂಬಳಿ

ಕಾಲ : ೧೪ನೇ ಶತಮಾನ

ಸ್ಥಳ : ದುರ್ಗಾಂಭೀಕಾ ದೇವಾಲಯದ ಪಕ್ಕದಲ್ಲಿ

ಶಿಲೆ : ಹಸಿರು ಶಿಲೆ

ಈ ಶಿವಲಿಂಗವನ್ನು ಜನರು ಭೈರವ ದೇವರು ಎಂಬ ನಂಬಿಕೆಯಿಂದ ಚಿಕ್ಕ ಮಕ್ಕಳಿಗೆ ಹೊಕ್ಕಳದಲ್ಲಿ ಗಾಯವಾದರೆ ಈ ಶಿವಲಿಂಗದ ಮೂರ್ತಿಶಿಲ್ಪಕ್ಕೆ ಮಂಡಕ್ಕಿ, ಉರ್ಕಡ್ಲಿ ತಂದು ಪೂಜೆ ಮಾಡಿ ಚಿಕ್ಕ ಮಕ್ಕಳಿಗೆ ಈ ವಸ್ತುವನ್ನು ಹಂಚಿದರೆ ಗಾಯ ವಾಸಿಯಾಗುತ್ತದೆ ಎಂಬ ನಂಬಿಕೆ ಊರಿನ ಜನರದ್ದು. ಇದು ಪಾಣಿಪೀಠದಿಂದ ಒಂದು ಅಡಿ ಎತ್ತರವಾಗಿದೆ ಹಾಗೂ ದುಂಡಗೆ, ಚೂಪಾಗಿ ಇರುವುದರಿಂದ ಇದು ಶಿವಲಿಂಗವಾಗಿದೆ.

**ಹೊಸಳ್ಳಿ ತೋಟದ ಶಿವಲಿಂಗ**

ಊರು : ಅಂಬಳಿ

ಕಾಲ : ೧೬-೧೭ನೇ ಶತಮಾನ

ಸ್ಥಳ : ಹೊಸಳ್ಳಿ ತೋಟ ಹಾಳುರು (ನೀಲಕಂಠಯ್ಯನವರ ಹೋಲದಲ್ಲಿ)

ಶಿಲೆ : ಹಸಿರು ಕಪ್ಪು ಶಿಲೆ

ಅಂಬಳಿ ಊರಿನ ಈಶಾನ್ಯ ದಿಕ್ಕಿನಲ್ಲಿರುವ ಹೊಸಳ್ಳಿ ಗ್ರಾಮವು ಇಂದು ಹಾಳುರಾಗಿ ನಶಿಸಿ ಹೋಗಿದೆ. ಆದರೆ ಅಂದಿನ ಜನರು ಸ್ಥಾಪಿಸಿದ ಮೂರ್ತಿಗಳು ಇಂದಿಗೂ ಇರುವುದು ವಿಶೇಷವಾಗಿದೆ. ಪಾಣಿಪಿಟ ಮಾತ್ರವಿದೆ ಶಿವಲಿಂಗವನ್ನು ನಿಧಿಯ ಆಸೆಯಿಂದ ಒಡೆದು ಹಾಕಿದ್ದಾರೆ. ಇದರ ಕಾಲವನ್ನು ೧೬-೧೭ನೆಯ ಶತಮಾನವಾಗಿದೆ. ಈ ಊರಿನಲ್ಲಿ ಜನರು ವಾಸವಾಗಿರುವುದು ಅಲ್ಲಿ ಇರುವ ಅವಶೇಷಗಳಿಂದ ತಿಳಿಯುತ್ತದೆ. ಇಲ್ಲಿರುವ ಮೂರ್ತಿಗಳು ವಿಜಯನಗರೋತ್ತರ ಕಾಲದಾಗಿದ್ದು ಹಸಿರು ಕಪ್ಪು ಶಿಲೆಯಲ್ಲಿ ಕೆತ್ತಲಾಗಿದೆ.

**ನಂದಿ ಶಿಲ್ಪ**

ಊರು : ಅಂಬಳಿ

ಕಾಲ : ೧೧ನೇ ಶತಮಾನ

ಸ್ಥಳ : ಕಲ್ಲೇಶ್ವರ ದೇವಾಲಯ

ಶಿಲೆ : ಕಪ್ಪು ಶಿಲೆ

ಕಲ್ಲೇಶ್ವರ ದೇವಾಲಯದ ಗರ್ಭಗೃಹದ ಒಳಗಡೆ ಶಿವಲಿಂಗದ ಮುಂದೆ ನಂದಿ ಶಿಲ್ಪವಿದೆ. ಈ ನಂದಿಯ ಶಿಲ್ಪ ಕುಳಿತ ಭಂಗಿಯಲ್ಲಿದೆ. ಕೊರಳಲ್ಲಿ ಅಗಲವಾದ ಕಂಠಹಾರ, ಘಂಟೆ ಮತ್ತು ಗೆಜ್ಜೆಯ ಸರ, ಹಣೆಯಲ್ಲಿ ಪಟ್ಟಿ, ಕೆಳಗೆ ಮಣಿ ಸರಳಗಳಿಂದ ಅಲಂಕೃತವಾಗಿದ್ದು. ಶಿವಲಿಂಗವನ್ನು ನಮಸ್ಕಾರಿಸುವ ಹಾಗೇ ಬಲಗಾಲನ್ನು ಮಡಚಿ ಎಡಗಾಲನ್ನು ಮುಂದಕ್ಕೆ ಚಾಚಿ ಕುಳಿತ ಭಂಗಿಯಲ್ಲಿದೆ.

ಊರು : ಅಂಬಳಿ

ಕಾಲ : ೧೨ನೇ ಶತಮಾನ

ಸ್ಥಳ : ಕಲ್ಲೇಶ್ವರ ದೇವಾಲಯ

ಶಿಲೆ : ಕಪ್ಪು ಶಿಲೆ

ಕಲ್ಲೇಶ್ವರ ದೇವಾಲಯದ ಮುಂದೆ ಬನ್ನಿಮರದ ಕೆಳಗೆ ಇರುವ ನಂದಿ ಈ ಮೂರ್ತಿಯು ಆಸೀನ ಸ್ಥಾನದಲ್ಲಿ ಕಂಡು ಬರುತ್ತದೆ. ಕೊರಳಲ್ಲಿ ಕಂಠಹಾರ, ಕಟ್ಟಿದಗಂಟೆ, ಗೆಜ್ಜೆ, ಸರ, ಹಣೆಪಟ್ಟಿ ಅಲ್ಲದೆ ಬೆನ್ನ ಮೇಲೆ ಜೂಲ್ ಹಾಕಿರುವ ರೀತಿಯಲ್ಲಿ ಬಹಳ ಸೂಕ್ಷ್ಮವಾದ ರೀತಿಯಲ್ಲಿ ಕೆತ್ತಿರುವುದನ್ನು ಗಮನಿಸಬಹುದು. ಈ ಮೂರ್ತಿ ೧೧ನೇ ಶತಮಾನದ ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ನಿರ್ಮಾಣವಾಗಿರಬಹುದೆಂದು ಹೇಳಲಾಗಿದೆ.

**ಗಣಪತಿ**

ಊರು : ಅಂಬಳಿ

ಕಾಲ : ೧೨ನೇ ಶತಮಾನ

ಸ್ಥಳ : ಕಲ್ಲೇಶ್ವರ ದೇವಾಲಯದ ಅಂತರಳದಲ್ಲಿ

ಶಿಲೆ : ಬಳಪ ಶಿಲೆ

ಕಲ್ಲೇಶ್ವರ ದೇವಾಲಯದ ಅಂತರಾಳದಲ್ಲಿರುವ ಈ ಶಿಲ್ಪವು ಕ್ರಿ.ಶ.ಸು. ೧೨ನೇ ಶತಮಾನದ್ದಾಗಿದೆ. ಇದನ್ನು ಬಳಪಶಿಲೆಯಲ್ಲಿ ಕೆತ್ತಲಾಗಿದ್ದು, ಇದು ೬೧ ಸೆಂ.ಮೀ. ಉದ್ದ, ೪೬ ಸೆಂ.ಮೀ. ಅಗಲ ೨೮ ಸೆಂ.ಮೀ. ದಪ್ಪವುಳ್ಳದ್ದಾಗಿದೆ. ಲಲಿತಾಸನದಲ್ಲಿ ಕುಳಿತಿರುವ ಗಣಪತಿಯು ಚತುರ್ಭುಜಧಾರಿಯಾಗಿದೆ. ಕಿರೀಟಧಾರಿಯಾದ ಈ ಮೂರ್ತಿಯ ಕಾಲಿನಲ್ಲಿ ಕಾಲ್ಗಡಗ, ಉದರಬಂಧ, ಯಜ್ಞೋಪವೀತವಿದ್ದು, ಎದೆಯವರೆಗೆ ಇಳಿಬಿದ್ದ ಸುಂದರ ಮಣಿಸರ, ಹೊಟ್ಟೆಯ ಮೇಲೆ ಸರ್ಪವನ್ನು ಸುತ್ತಲಾಗಿದೆ. ಭುಜಕೀರ್ತಿ, ಕೇಯೂರ ಹಾಗೂ ಕೈಗಡಗಗಳಿವೆ. ಮೇಲಿನ ಕೈಯಲ್ಲಿ ಅಂಕುಶ, ಪಾಶವಿದ್ದು, ಕೆಳಗಿನ ಬಲಗೈಯಲ್ಲಿ ದಂತ ಎಡಗೈಯಲ್ಲಿ ಮೋದಕಪಾತ್ರೆಯಿದೆ. ಗಣಪತಿಯ ಸೊಂಡಿಲು ಭಗ್ನಗೊಂಡಿದೆ. ಇವು ಈ ಮೂರ್ತಿಶಿಲ್ಪದ ಲಕ್ಷಣಗಳಾಗಿವೆ. ಈ ಮೂರ್ತಿಯ ಪಕ್ಕದಲ್ಲಿ ಮತ್ತೊಂದು ಗಣಪತಿ ಮೂರ್ತಿಯಿದ್ದು, ಇದರ ತಲೆಯ ಭಾಗ ಮತ್ತು ಕೈಗಳ ಭಾಗವು ಭಗ್ನಗೊಂಡಿದೆ.

**ಬಸವಣ್ಣ ದೇವಾಲಯದಲ್ಲಿರುವ ಗಣಪತಿ**

ಊರು : ಅಂಬಳಿ

ಕಾಲ : ೧೨ನೇ ಶತಮಾನ

ಸ್ಥಳ : ಕಲ್ಲೇಶ್ವರ ದೇವಾಲಯದ ಅಂತರಾಳದಲ್ಲಿ

ಶಿಲೆ : ಬಳಪ ಶಿಲೆ

ಗ್ರಾಮದ ಬಸವಣ್ಣ ದೇವಾಲಯದಲ್ಲಿರುವ ಈ ಶಿಲ್ಪವು ಕ್ರಿ.ಶ.ಸು ೧೨ನೇ ಶತಮಾನದ್ದಾಗಿದೆ. ಇದನ್ನು ಬಳಪ ಶಿಲೆಯಲ್ಲಿ ಕೆತ್ತಲಾಗಿದ್ದು, ಲಲಿತಾಸನದಲ್ಲಿ ಕುಳಿತಿರುವ ಗಣಪತಿಯು ಚತುರ್ಭುಜಧಾರಿಯಾಗಿದೆ, ಈ ಮೂರ್ತಿಯ ಕಾಲಿನಲ್ಲಿ ಕಾಲ್ಗಡಗ, ಉದರಬಂಧ, ಯಜ್ಞೋಪವೀತವಿದ್ದು, ಎದೆಯವರೆಗೆ ಇಳಿಬಿದ್ದ ಸುಂದರ ಮಣಿಸರ, ಹೊಟ್ಟೆಯ ಮೇಲೆ ಸರ್ಪವನ್ನು ಸುತ್ತಲಾಗಿದೆ. ಭುಜಕೀರ್ತಿ, ಕೇಯೂರ ಹಾಗೂ ಕೈಗಡಗಗಳಿವೆ. ಕೈ ಮತ್ತು ಸೊಂಡಿಲಿನ ಭಾಗವು ಮುಕ್ಕಾಗಿದೆ.

**ವೈಷ್ಣವ ಶಿಲ್ಪಗಳು**

ಪಾಂಚರಾತ್ರಗಮದಲ್ಲಿ ಕೇಶವಾದಿ ವಿಷ್ಣುಚತುರ್ವಿಂಶತಿ ಮೂರ್ತಿಗಳ ಬಳಕೆ ಹೆಚ್ಚಾಗಿದೆ. ಮಹಾಭಾರತದ ಅನುಶಾಸನ ಪರ್ವದಲ್ಲಿ ಬರುವ 'ವಿಷ್ಣು ಸಹಸ್ರನಾಮ'ದಿಂದ ಇಪ್ಪತ್ನಾಲ್ಕು ಹೆಸರುಗಳನ್ನು ಆಯ್ದುಕೊಂಡ ಅವಕ್ಕೆ ಮೂರ್ತಿಲಕ್ಷಣವನ್ನು ಪದ್ಮಪುರಾಣದ ಪಾತಾಳ ಖಂಡವು ಹಾಗೂ ರೂಪಮಂಡಲವೆಂಬ ಪ್ರಕರಣ ಗ್ರಂಥವೂ ನಿರ್ದೇಶಿಸಿದವು. ಅಹಿರ್ಬುಧ್ನ್ಯ ಸಂಹಿತೆಯಲ್ಲಿ ಮತ್ತು ಬೃಹತ್ ಸಂಹಿತೆಯಲ್ಲಿ ವ್ಯೂಹಗಳಿಂದ ಹನ್ನೆರಡು ಇತರ ಮೂರ್ತಿಗಳು ಬಂದಿರುವುದನ್ನು ಹೇಳಿದೆ. ಪರವಾಸುದೇವನಿಂದ ಕೇಶವ, ನಾರಾಯಣ, ಮಾಧವ, ಸಂಕರ್ಷಣನಿಂದ ಗೋವಿಂದ, ವಿಷ್ಣು, ಮಧುಸೂದನ, ಪ್ರದ್ಯುಮ್ನನಿಂದ ತ್ರಿವಿಕ್ರಮ, ವಾಮನ, ಶ್ರೀಧರ, ಅನಿರುದ್ಧನಿಂದ ಹೃಷಿಕೇಶ, ಪದ್ಮನಾಭ, ದಾಮೋದರ ಹೀಗೆ ಒಂದೊಂದು ವ್ಯೂಹದಿಂದಲೂ ಮೂರು ಮೂರು ಮೂರ್ತಿಗಳು ಅಲ್ಲಿ ಕಾಣಿಸಿದೆ.

**ಆಂಜನೇಯ ಶಿಲ್ಪ**

ಊರು : ಅಂಬಳಿ

ಕಾಲ : ೧೨ನೇ ಶತಮಾನ

ಸ್ಥಳ : ಆಂಜನೇಯ ದೇವಾಲಯದ ಗರ್ಭಗೃಹದಲ್ಲಿ

ಶಿಲೆ : ಬಳಪ ಶಿಲೆ

ಗ್ರಾಮದ ಮಧ್ಯದಲ್ಲಿರುವ ಈ ದೇವಾಲಯ, ಸಂಪೂರ್ಣ ಜೀರ್ಣೋದ್ಧಾರವಾಗಿ. ಕ್ರಿ.ಶ.ಸು. ೧೨ನೇ ಶತಮಾನದ ಈ ದೇವಾಲಯವು ಕಲ್ಯಾಣ ಚಾಲುಕ್ಯ ಶೈಲಿಯಲ್ಲಿದೆ.

ದಕ್ಷಿಣಾಭಿಮುಖವಾಗಿದ್ದರೂ ಆಂಜನೇಯನು ಪೂರ್ವ ದಿಕ್ಕಿನ ಕಡೆಗೆ ಮುಖಮಾಡಿದ್ದಾನೆ. ಈ ಶಿಲ್ಪದ ಹಿಂದೆ ಗರುಡ ಸ್ತಂಭವಿದೆ, ಇದಕ್ಕೆ ಒರಗಿಸಿ ಈ ಶಿಲ್ಪವನ್ನು ಇಡಲಾಗಿದೆ. ಹಾಗೂ ಗರ್ಭಗುಡಿಯ ಸುತ್ತ ಪ್ರದಕ್ಷಿಣೆ ಪಥವಿದೆ. ಈ ಶಿಲ್ಪವು ವೀರಾಸನದಲ್ಲಿದ್ದು, ದ್ವಿಬಾಹು, ಬಲಗೈ ಅಭಯಹಸ್ತ ಎಡಗೈಯಲ್ಲಿ ಹೂವಿನ ಗೊಂಚಲನ್ನು ಹಿಡಿದುಕೊಂಡಿದ್ದು ಸೊಂಟದ ಮೇಲಿಟ್ಟಿದ್ದಾನೆ. ಪಾದದ ಕೆಳಗೆ ಹೂ-ಬಳ್ಳಿಯಿಂದ ಅಲಂಕಾರಗೊಂಡಿದ್ದು, ಕಿವಿಯಲ್ಲಿ ಕರ್ಣಕುಂಡಲ, ಕಂಠಹಾರ, ಯಜ್ಞೋಪವೀತ ಜಪಮಾಲೆ, ಉದರ ಬಂಧ, ಕಟೀಸೂತ್ರ, ತೋಳು ಬಂಧಿ, ಕೈಕಡಗ, ಕಾಲ್ಕಡಗ, ಜಟಾಮುಕುಟಧಾರಿಯಾಗಿದ್ದು, ಜನಿವಾರ ಧರಿಸಿದ್ದಾನೆ.

**ಹೊಸಹಳ್ಳಿ ತೋಟದ ಆಂಜನೇಯ**

ಊರು : ಅಂಬಳಿ

ಕಾಲ : ೧೬-೧೭ನೇ ಶತಮಾನ

ಸ್ಥಳ : ಹಾಳೂರು ಹೊಸಹಳ್ಳಿ ತೋಟದ ಎಚ್.ಎಂ. ನೀಲಕಂಠಯ್ಯನವರ ಹೊಲದಲ್ಲಿ

ಶಿಲೆ : ಕಾಡುಕಲ್ಲು (ಬಿಳಿಕಲ್ಲು)

ಅಂಬಳಿ ಗ್ರಾಮದ ನೈರುತ್ಯ ದಿಕ್ಕಿಗೆ, ಇರುವ ಈ ಹಾಳುರು ಸುಮಾರು ೨ ಕಿ.ಮೀ. ದೂರದಲ್ಲಿದೆ. ಇಲ್ಲಿ ಆಂಜನೇಯ ಉಬ್ಬುಶಿಲ್ಪವಿದೆ, ಕಾಡುಕಲ್ಲಿನಲ್ಲಿ (ಬಿಳಿಕಲ್ಲು)ಯಲ್ಲಿ ಕಂಡರಿಸಲ್ಪಟ್ಟಿದೆ. ಕ್ರಿ.ಶ. ಸು. ೧೬-೧೭ನೇ ಶತಮಾನದ ವಿಜಯನಗರೋತ್ತರ ಕಾಲದ್ದಾಗಿದೆ, ಈ ಮೂರ್ತಿ ಶಿಲ್ಪವು ದಕ್ಷಿಣಾಭಿಮುಖವಾಗಿದರು ಆಂಜನೇಯನ ಮುಖವು ಪೂರ್ವ ದಿಕ್ಕಿನ ಕಡೆಗೆ ಮುಖಮಾಡಿದ್ದಾನೆ. ಈ ಶಿಲ್ಪವು ವೀರಾಸನದಲ್ಲಿದ್ದು, ದ್ವಿಬಾಹು, ಬಲಗೈ ಅಭಯಹಸ್ತ ಎಡಗೈಯಲ್ಲಿ ಹೂವಿನ ಗೊಂಚಲನ್ನು ಹಿಡಿದುಕೊಂಡಿದ್ದು ಸೊಂಟದ ಮೇಲಿಟ್ಟಿದ್ದಾನೆ. ಪಾದದ ಕೆಳಗೆ ಹೂ-ಬಳ್ಳಿಯಿಂದ ಅಲಂಕಾರ ಗೊಂಡಿದ್ದು, ಕಿವಿಯಲ್ಲಿ ಕರ್ಣಕುಂಡಲ, ಕಂಠಹಾರ, ಯಜ್ಞೊಫವೀತ ಜಪಮಾಲೆ, ಉದರ ಬಂಧ, ಕಟೀಸೂತ್ರ, ತೋಳು ಬಂಧಿ, ಕೈಕಡಗ, ಕಾಲ್ಕಡಗ, ಜಟಾಮುಕುಟಧಾರಿಯಾಗಿದ್ದು, ಜನಿವಾರ ಧರಿಸಿದ್ದಾನೆ.

**ಶಾಕ್ತ ಪಂಥದ ಶಿಲ್ಪಗಳು**

ಶಾಕ್ತರ ನಂಬಿಕೆ ಪ್ರಕಾರ ಎಲ್ಲಾ ಸ್ತ್ರೀಯರು ದೇವತಾ ಸ್ವರೂಪರು (ಸ್ತ್ರೀಯಃನಮಸ್ತಾಃ ಸಕಲಾ ಜಗತ್ರ), (ಪ್ರಕೃತೇ ಪ್ರತಿ ವಿಶ್ವೇಷು ದೇವ್ಯಶ್ಚ ಸರ್ವಯೋಷಿತಃ) ಇದು ನೂರಾರು ಮಾತೃ ದೇವತೆಯರ ಕಲ್ಪನೆಗೆ ಎಡೆ ಮಾಡಿಕೊಟ್ಟಿತು. ಮಾತೃ ಪರಂಪರೆಯಲ್ಲಿ ಪಾರ್ವತಿ ಶಿವನ ಹಿನ್ನಲೆಯಲ್ಲಿ ಪೂಜೆಗೊಳ್ಳಪಟ್ಟರೆ, ಲಕ್ಷ್ಮೀ ವಿಷ್ಣುವಿನ ಜೊತೆ, ಸರಸ್ವತಿ ಬ್ರಹ್ಮನೊಂದಿಗೆ ಗುರುತಿಸಲ್ಪಟ್ಟು ಆರಾಧನೆಗೊಳ್ಳತ್ತಾರೆ. ಹಾಗಾಗಿ ಭಾರತದ ಶಿಲ್ಪಕಲೆಯ ಇತಿಹಾಸವನ್ನು ನೋಡಿದರೆ ಹಲವು ರೀತಿಯ ಶಕ್ತಿದೇವತೆಯ ಶಿಲ್ಪಗಳು ಕಂಡುಬರುವುದನ್ನು ನೋಡಬಹುದು. ಇವರಲ್ಲಿ ಪ್ರಮುಖವಾಗಿ ಪಾರ್ವತಿ, ಭದ್ರಕಾಳಿ, ಮಹಿಷಮರ್ಧಿನಿ, ಸಪ್ತಮಾತೃಕೆಯರು, ಲಕ್ಷ್ಮೀ ಇನ್ನೂ ಮುಂತಾದವರನ್ನು ಕಾಣುತ್ತೇವೆ.

**ಮಹಿಷಾಸುರ ಮರ್ಧಿನಿ ಶಿಲ್ಪ**

ಈಕೆಯು ಶಕ್ತಿದೇವತೆಗಳಲ್ಲೋಬ್ಬಳು ಶಿಲ್ಪಶಾಸ್ತ್ರದ ಪ್ರಕಾರ ಈ ದೇವತೆಗೆ ಹತ್ತು ಕೈಗಳು, ಮೂರು ಕಣ್ಣುಗಳಿರುತ್ತವೆ. ಸುಮಾರು ೧೦೮ ಶಕ್ತಿ ದೇವತೆಗಳಲ್ಲೆಲ್ಲ ವಿಶೇಷ ವ್ಯಕ್ತಿತ್ವವುಳ್ಳವಳೆಂದರೆ ಮಹಿಷಾಸುರ ಮರ್ಧಿನಿ. ಇವಳದ್ದು, ಉಗ್ರರೂಪವಾಗಿದ್ದು, ದುಷ್ಟರನ್ನು ಸಂಹಾರ ಮಾಡುವ ಉಗ್ರದೇವಿಯಾಗಿದ್ದಾಳೆ. ಮಹಿಷನು ಕೋಣದ ರೂಪವನ್ನು ಧರಿಸಿ ಬಂದಾಗ, ಮಹಿಷಮರ್ಧಿನಿಯು ಕೋಣದ ತಲೆಯನ್ನು ಕತ್ತರಿಸಿ ಕಾಲಿನಿಂದ ಅದನ್ನು ತುಳಿದಾಗ ಅಸುರನು ಕತ್ತಿನಿಂದ ಹೊರಬರುತ್ತಾನೆ, ಅನಂತರ ಅವನನ್ನು ಸಂಹರಿಸುತ್ತಾಳೆ. ಮಹಿಷಮರ್ಧಿನಿ ಮೂರ್ತಿಗಳಲ್ಲಿ ಬಹುತೇಕ ಇದೇ ವಿವರಣೆಯನ್ನು ಕಾಣಬಹುದು.

**ಚೌಡೇಶ್ವರಿ (ಮಹಿಷಸುರ ಮರ್ಧಿನಿ)**

ಸ್ಥಳ : ಅಂಗನವಾಡಿ ಕೇಂದ್ರ (ಚೌಡೇಶ್ವರಿ ಕ್ಯಾಂಪ್)

ಶೈಲಿ : ಕಲ್ಯಾಣ ಚಾಲುಕ್ಯ

ಅಭಿಮುಖ : ಪೂರ್ವಾಭಿಮುಖ

ಕಾಲ : ಕ್ರಿ.ಶ. ೧೨ನೆಯ ಶತಮಾನ

ಸ್ಥಿತಿ : ಕನಿಷ್ಠ, ಶಿಥಿಲಗೊಂಡಿದೆ

ಅಂಬಳಿ ಗ್ರಾಮದ ಚೌಡೇಶ್ವರಿ ಬಡಾವಣೆಯಲ್ಲಿ, ಅಂಗನವಾಡಿ ಕೇಂದ್ರದ ಪಕ್ಕದಲ್ಲಿರುವ ಈ ಶಿಲ್ಪವು ಕ್ರಿ.ಶ.ಸು. ೧೨ನೇ ಶತಮಾನದ್ದಾಗಿದೆ. ಇದನ್ನು ಕಪ್ಪು ಬಳಪದ ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಈ ಮೂರ್ತಿ ಜಟಧಾರಿಯಾಗಿದ್ದು, ಜಡೆಯು ಮುಡಿಯಿಂದ ಪಾದದವರೆಗೆ ಸುತ್ತು ಹೊರದಿದೆ, ಕೊರಳಲ್ಲಿ ಕಂಠಾಭರಣ, ರುದ್ರಾಕ್ಷಿ ಮಾಲೆ, ಕುಚಬಂಧವಿದೆ. ಚತುರ್ಭುಜಧಾರಿಯಾದ ಈ ದೇವಿಯು ಭುಜಕೀರ್ತಿ, ಕೇಯೂರ , ಕೈಕಡಗಗಳನ್ನು ಧರಿಸಿದೆ. ಬಲಕೈಯಲ್ಲಿ ತ್ರಿಶೂಲ, ಖಡ್ಗ, ಎಡಕೈಯಲ್ಲಿ ಡಮರ, ಅಭಯ ಹಸ್ತವಿದೆ. ಕಾಲಿನಲ್ಲಿ ಕಾಲ್ಕಡಗ, ಸೊಂಟಪಟ್ಟಿಧಾರಿಸಿದಾಳೆ, ಈ ಮೂರ್ತಿಯು ಭಗ್ನವಾಗಿದ್ದು ಪೂಜೆಯ ಬಳಕೆಯಲ್ಲಿ, ಹೊಸ ಮೂರ್ತಿಯನ್ನು ಪ್ರತಿಷ್ಠಾಪಿಸಿ, ಪೂಜೆಯನ್ನು ಮಾಡಲಾಗಿದೆ.

**ಗಜಲಕ್ಷ್ಮಿ ಶಿಲ್ಪಗಳು**

ಗಜಲಕ್ಷ್ಮಿ ಶಿಲ್ಪಗಳು ಪದ್ಮಪೀಠದ ಮೇಲೆ ಪದ್ಮಾಸನದಲ್ಲಿ ಆಸೀನಳಾಗಿರುತ್ತಾಳೆ. ಕೈಗಳಲ್ಲಿ ಶಂಖ ಮತ್ತು ಪದ್ಮಗಳಿರುತ್ತದೆ. ಇಕ್ಕೆಲುಗಳಲ್ಲಿ ೨ ಆನೆಗಳು ಸೊಂಡಿಲುಗಳಲ್ಲಿ ಕುಂಭಗಳನ್ನು ಹಿಡಿದುಕೊಂಡು ಅಭಿಷೇಕ ಮಾಡುತ್ತಿರುವಂತೆ ತೋರಿಸಲಾಗಿರುತ್ತದೆ. ಈ ಎರಡೂ ಆನೆಗಳು ಮತ್ತು ಕೈಗಳಲ್ಲಿರುವ ಶಂಖ ಪದ್ಮಗಳು ಶಂಖ ಮತ್ತು ಪದ್ಮ ನಿಧಿಗಳನ್ನು ಸೂಚಿಸುತ್ತವೆ. ಇದರಿಂದ ಲಕ್ಷ್ಮಿಗೂ ನಿಧಿಪತಿಯಾದ ಕುಬೇರನಿಗೂ ಇರುವ ಸಂಬಂಧ ಧ್ವನಿತವಾಗುತ್ತದೆ. ಕೆಲವೊಂದು ಗಜಲಕ್ಷ್ಮಿ ಶಿಲ್ಪಗಳಲ್ಲಿ ಈಕೆಯ ಪಾರ್ಶ್ವದಲ್ಲಿ ೪ ಆನೆಗಳು ಸೋಂಡಿಲಿನಿಂದ ನೀರನ್ನು

ಸುರಿದು ಅಭಿಕ್ಷೇಕ ಮಾಡುತ್ತಿರುವಂತೆ ಮತ್ತು ಸಾಮಾನ್ಯವಾಗಿ ಶಂಖ ನಿಧಿ, ಪದ್ಮನಿಧಿ, ಹಾಗೂ ಗಂಧರ್ವರ ಶಿಲ್ಪಗಳನ್ನು ತೋರಿಸಲಾಗಿದೆ.

ಶಿಲ್ಪ : ಗಜಲಕ್ಷ್ಮಿ

ಸ್ಥಳ : ಕಲ್ಲೇಶ್ವರ ದೇವಾಲಯ

ಶೈಲಿ : ಕಲ್ಯಾಣ ಚಾಲುಕ್ಯ

ಕಾಲ : ಕ್ರಿ.ಶ. ೧೧ನೆಯ ಶತಮಾನ

ಅಭಿಮುಖ : ಪೂರ್ವಾಭಿಮುಖ

ಸ್ಥಿತಿ : ಉತ್ತಮ

ಈ ಗಜಲಕ್ಷ್ಮಿ ಶಿಲ್ಪವು ಕ್ರಿ.ಶ. ೧೧ನೇ ಶತಮಾನದ ಕಲ್ಯಾಣ ಚಾಲುಕ್ಯರ ಕಾಲ ಸೇರಿದೆ. ಕಲ್ಲೇಶ್ವರ ದೇವಾಲಯದ ಅಂತರಾಳದ ಲಲಾಟ ಬಿಂಬದಲ್ಲಿ. ಈ ಗಜಲಕ್ಷ್ಮಿ ಶಿಲ್ಪವನ್ನು ಕಾಣಬಹುದು. ಕಪ್ಪು ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಈ ಶಿಲ್ಪಗಳಲ್ಲಿ ಲಕ್ಷ್ಮಿ ದ್ವಿಭುಜ, ಕರಂಡ ಮುಕುಟ, ವರ್ತುಲಾಕಾರದ ಓಲೆ, ಪದಕಸರ, ಕಂಠಹಾರ. ತೋಳು ಬಂಧಿ, ಕೈಬಳೆ, ಕಾಲ್ಕಡಗಗಳಿಂದ ಅಲಂಕೃತಳಾಗಿ ಪದ್ಮಾಸನದಲಿ ಧ್ಯಾನಸಕ್ತಳಾಗಿರುವುದು. ಶಿಲ್ಪದ ಕೆಳಭಾಗದಲ್ಲಿ ಐದು ಗಜಗಳು ಸೊಂಡಿಲಿನ ನೀರಿನಿಂದ ಅಭಿಶೇಕ ಮಾಡುತ್ತಿರುವಂತೆ ತೋರುತ್ತದೆ. ಇದರ ಸುತ್ತ ಇತರೆ ದೇವರ ಶಿಲ್ಪಗಳಿದ್ದು, ಅವು ಸುಕನಾಸಿಯಲ್ಲಿ ಆಸೀನವಾಗಿವೆ, ಈ ಶಿಲ್ಪದ ವೈಶಿಷ್ಟತೆ.

ಶಿಲ್ಪ : ಗಜಲಕ್ಷ್ಮಿ

ಸ್ಥಳ : ರಾಮಲಿಂಗೇಶ್ವರ ದೇವಾಲಯ

ಶೈಲಿ : ಕಲ್ಯಾಣ ಚಾಲುಕ್ಯ

ಕಾಲ : ಕ್ರಿ.ಶ. ೧೨ನೆಯ ಶತಮಾನ

ಅಭಿಮುಖ : ಪೂರ್ವಾಭಿಮುಖ

ಸ್ಥಿತಿ : ಜೀರ್ಣೋದ್ಧಾರ ಉತ್ತಮ

ರಾಮಲಿಂಗೇಶ್ವರ ದೇವಾಲಯದ ಅಂತರಾಳದ ಲಲಾಟ ಬಿಂಬದಲ್ಲಿ ಈ ಗಜಲಕ್ಷ್ಮಿ ಶಿಲ್ಪವನ್ನು ಕಾಣಬಹುದು. ಕಪ್ಪು ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಈ ಶಿಲ್ಪಗಳಲ್ಲಿ ಲಕ್ಷ್ಮಿ ದ್ವಿಭುಜ, ಕರಂಡ ಮುಕುಟ, ವರ್ತುಲಾಕಾರದ ಓಲೆ, ಪದಕಸರ, ಕಂಠಹಾರ. ತೋಳು ಬಂಧಿ, ಕೈಬಳೆ, ಕಾಲ್ಕಡಗಗಳಿಂದ ಅಲಂಕೃತಳಾಗಿ ಪದ್ಮಾಸನದಲ್ಲಿ ಧ್ಯಾನಾಸಕ್ತಳಾಗಿರುವುದು ಈ ಶಿಲ್ಪದ ವೈಶಿಷ್ಟ್ಯತೆ.

## ಸಪ್ತ ಮಾತೃಕೆಯರ ಶಿಲ್ಪಗಳು

ಋಗ್ವೇದದಲ್ಲಿ ಅಗ್ನಿಗೆ ಏಳು ಜನ ತಾಯಂದಿರು. ಇವರೆ ಸಪ್ತ ಮಾತೃಕೆಯರು, ಪರಿವಾರ ದೇವತೆಗಳ ಸಮೂಹದಲ್ಲಿ ಬರುವ ಸಪ್ತ ಮಾತೃಕೆಯರು ಕನ್ನೆಯರೆಂದು, ಅಮ್ಮನವರೆಂದು ಪ್ರಸಿದ್ಧಿಯಾಗಿದ್ದಾರೆ, ವರಹಾ ಪುರಾಣದಲ್ಲಿ ಶಿವನ ಬಾಯಿಯಿಂದ ಬಂದ ಜ್ವಾಲೆತಿಂದು ಜನಿಸಿದ ಯೋಗೀಶ್ವರಿ ಹಾಗೂ ಬೇರೆ ಬೇರೆ ದೇವತೆಗಳೆಂದೂ ಮಾರ್ಕಂಡೇಯ ಪುರಾಣದಲ್ಲಿ ದೇವಿಯು ಶುಂಭ ಮತ್ತು ನಿಶುಭಂರನ್ನು ಸಂಹರಿಸಲು ಹೊರಟಾಗ ಬ್ರಹ್ಮ, ಕಾರ್ತೀಕೆಯ, ವಿಷ್ಣ ಮತ್ತು ಇಂದ್ರರಿಂದ ಎಂಟು ಜನ ಶಕ್ತಿಯರು ಸೃಷ್ಟಿವಿಯಾದರೆಂದು ಹೇಳಲಾಗಿದೆ. ಬ್ರಹ್ಮನು ನಿರ‍್ರಿತನನ್ನು ಸಂಹರಿಸಲು ಏಳು ಜನ ಮಾತೃಕೆಯರನ್ನು ಸೃಷ್ಟಿವಿಸಿದನೆಂದು ಸುಪ್ರಭೇದಾಗಮದಲ್ಲಿ ಉಲ್ಲೇಖಿಸಿದೆ.

ಶಿಲ್ಪ : ಸಪ್ತಮಾತೃಕೆಯರ ಶಿಲ್ಪಗಳು

ಸ್ಥಳ : ಕಲ್ಲೇಶ್ವರ ದೇವಾಲಯ

ಶೈಲಿ : ಕಲ್ಯಾಣ ಚಾಲುಕ್ಯ

ಕಾಲ : ಕ್ರಿ.ಶ. ೧೧ನೆಯ ಶತಮಾನ

ಅಭಿಮುಖ : ಪಶ್ಚಿಮಾಭಿಮುಖ

ಸ್ಥಿತಿ : ಕನಿಷ್ಠ

ಕಲ್ಲೇಶ್ವರ ದೇವಾಲಯ ಮೇಲಿನ ಪಟ್ಟಿಕ್ಕೆಯಲ್ಲಿ ಕಲ್ಯಾಣ ಚಾಲುಕ್ಯ ಕಾಲದ ಸಪ್ತ ಮಾತೃಕೆಯರ ಶಿಲ್ಪ ಪಟ್ಟಿಕೆಯಿದ್ದು, ಕಪ್ಪು ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಪಶ್ಚಿಮಾಭಿಮುಖವಾಗಿ ಇರುವ ಸಪ್ತ ಮಾತೃಕೆಯಲ್ಲಿ ಎರಡು ಶಿಲ್ಪಗಳು ನಶಿಸಿವೆ. ಕೇವಲ ಐದು ಶಿಲ್ಪಗಳು ಮಾತ್ರ ಉಳಿದಿವೆ. ಕೌಮಾರಿ, ವೈಷ್ಣವಿ, ವರಾಹಿ, ಇಂದ್ರಾಣಿ ಮತ್ತು ಚಾಮುಂಡಿ ಶಿಲ್ಪಗಳು ಸವ್ಯಲಲಿತಾಸನದಲ್ಲಿ ಆಸೀನರಾಗಿದ್ದಾರೆ. ಕೌಮಾರಿ, ವಾಹನ ಮಯೂರವಾಗಿದೆ. ಕೈಗಳಲ್ಲಿ ಆಯುಧಗಳು ಕ್ರಮವಾಗಿ ಶಕ್ತಿ, ಪತಾಕೆ, ಪರಶು ಮತ್ತು ಪದ್ಮಗಳಿವೆ, ವೈಷ್ಣವಿಯ ವಾಹನ ಗರುಡ, ಇವಳ ಕೈಗಳಲ್ಲಿ ಆಯುಧಗಳು ಕ್ರಮವಾಗಿ ಗದೆ, ಪದ್ಮ ಚಕ್ರ ಮತ್ತು ಶಂಖಗಳಿವೆ, ವರಾಹಿಯ ಕೈಗಳಲ್ಲಿ ಖಡ್ಗ, ದಂಡ, ಖೇಟಕ ಮತ್ತು ಪಾನಪಾತ್ರಗಳಿವೆ. ಇಂದ್ರಾಣಿ ಕೈಗಳಲ್ಲಿ ಕ್ರಮವಾಗಿ ಸೂತ್ರ, ವಜ್ರ, ಪದ್ಮ ಪಾನಪಾತ್ರೆಗಳಿವೆ. ಚಾಮುಂಡಿ ಕೈಗಳಲ್ಲಿ ಕ್ರಮವಾಗಿ ಖಡ್ಗ, ಚಕ್ರ, ಖೇಟಕ ಮತ್ತು ಪಾಶಗಳಿವೆ, ಆಸನ ಭುಜ ಆಭರಣ ಮತ್ತು ವಾಹನಗಳು ಮೇಲಿನ ಶಿಲ್ಪಗಳಂತಿವೆ.

## ನಾಗ- ನಾಗಿಣಿಯರು

ಕರ್ನಾಟಕದಲ್ಲಿ ನಾಗರಾಧನೆಯು ಬಹು ಹಿಂದಿನಿಂದಲೂ ರೂಢಿಯಲ್ಲಿದೆ. ಆದಿ ಇತಿಹಾಸ ಕಾಲಕ್ಕೆ ಸೇರಿದ ಅಥವಾ ಶಾತವಾಹನರ ಕಾಲದ ಬನವಾಸಿಯ ನಾಗಪ್ರತಿಮೆ ಪ್ರಸಿದ್ಧವಾದದ್ದು. ಮೇಲಿನ ಭಾಗ ಮಾನವ ದೇಹ, ಕೆಳಗಿನ ಭಾಗ ಸರ್ಪದ್ದಾಗಿರುವ

ಮೂರ್ತಿಗಳು ಇವಾಗಿರುತ್ತವೆ. ನಾಗ-ನಾಗಿಣಿ ಮೂರ್ತಿಶಿಲ್ಪ ದೊರೆಯುತ್ತವೆ. ಮತ್ತೆ ಕೆಲವು ಕಡೆ ಪ್ರತ್ಯೇಕ ನಾಗ ಶಿಲ್ಪಗಳು ಮಾತ್ರವೇ ದೊರೆಯುತ್ತವೆ.

ಶಿಲ್ಪ : ನಾಗ

ಊರು : ಅಂಬಳಿ

ಕಾಲ : ೧೧ನೇ ಶತಮಾನ

ಸ್ಥಳ : ಕಲ್ಲೇಶ್ವರ ದೇವಾಲಯದ ಮುಂದೇ, ಬನ್ನಿ ಮರದ ಕೆಳಗೆ

ಶಿಲೆ : ಕಪ್ಪು ಶಿಲೆ

ಕಲ್ಲೇಶ್ವರ ದೇವಾಲಯ ಮುಂದೇ ಇರುವ ಬನ್ನಿ ಮರದ ಕೆಳಗಡೆ ಇವೆ. ಇಲ್ಲಿ ಹಲವಾರು ನಾಗ ಶಿಲ್ಪಗಳಿದ್ದು, ಇವುಗಳಲ್ಲಿ ಕೇಲವು ಆಧುನಿಕ ಕಾಲಕ್ಕೆ ಸಂಬಂಧಿಸಿದ್ದವಾಗಿವೆ. ಇನ್ನು ಕೆಲವು ನಾಗ ಶಿಲ್ಪಗಳು ೧೧ನೇ ಶತಮಾನದ ಕಲ್ಯಾಣಿ ಚಾಲುಕ್ಯರ ಕಾಲದ ಕಪ್ಪು ಶಿಲೆಯಲ್ಲಿ ಕಂಡರಿಸಲ್ಪಟ್ಟಿವೆ.

ಶಿಲ್ಪ : ನಾಗ-ನಾಗಿಣಿ

ಊರು : ಅಂಬಳಿ

ಕಾಲ : ೧೨ನೇ ಶತಮಾನ

ಸ್ಥಳ : ರಾಮಲಿಂಗೇಶ್ವರ ದೇವಾಲಯ

ಶಿಲೆ : ಕಪ್ಪು ಮಿಶ್ರಿತ ನೀಲಿಛಾಯೆ ಶಿಲೆ

ರಾಮಲಿಂಗೇಶ್ವರ ದೇವಾಲಯದ ಲಲಾಟ ಬಿಂಬದಲ್ಲಿ, ಗಜಲಕ್ಷ್ಮಿಯ ಅಕ್ಕ-ಪಕ್ಕದಲ್ಲಿವೆ. ಕ್ರಿ.ಶ. ಸು. ೧೨ನೇ ಶತಮಾನದ ನಾಗ-ನಾಗಿಣಿಯ ಶಿಲ್ಪವಾಗಿದ್ದು, ಕಪ್ಪು ಮಿಶ್ರಿತ ನೀಲಿಛಾಯೆಯ ಬಳಪದ ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಕೆಳಭಾಗ ಸರ್ಪಾಕಾರ ಮತ್ತು ಮೇಲಿನ ಭಾಗ ಮನುಷ್ಯಕಾರ ರೂಪದಲ್ಲಿದೆ.

ಶಿಲ್ಪ : ನಾಗ-ನಾಗಿಣಿ

ಊರು : ಅಂಬಳಿ

ಕಾಲ : ೧೨ನೇ ಶತಮಾನ

ಸ್ಥಳ : ಆಂಜನೇಯ ದೇವಾಲಯ, ಪಶ್ಚಿಮ ದಿಕ್ಕಿಗೆ ಇದೆ

ಶಿಲೆ : ಕಪ್ಪು ಶಿಲೆ

ಆಂಜನೇಯ ದೇವಾಲಯದ ಪಶ್ಚಿಮ ದಿಕ್ಕಿನಲ್ಲಿರುವ ಈ ಶಿಲ್ಪವು ಕ್ರಿ.ಶ.ಸು. ೧೨ನೇ ಶತಮಾನದ್ದಾಗಿದೆ. ಇದನ್ನು ಬಳಪದ ಶಿಲೆಯಲ್ಲಿ ಕೆತ್ತಲಾಗಿದ್ದು, ಇದು ೭೬ ಸೆಂ.ಮೀ. ಉದ್ದ, ೫೬ ಸೆಂ.ಮೀ. ಅಗಲವುಳ್ಳದಾಗಿದೆ. ಒಂದೇ ಕಲ್ಲಿನಲ್ಲಿ ಐದು ಹೆಡೆಗಳುವುಳ್ಳ ಎರಡು ನಾಗ-ನಾಗಿಣಿ ಶಿಲ್ಪವು ಕೆಳಗಿನ ಅರ್ಧಭಾಗವು ಸರ್ಪದಂತೆ ಮೇಲಿನ ಅರ್ಧಭಾಗವು ಮನುಷ್ಯನಂತೆ ಇದ್ದು, ಕೈಗಳಲ್ಲಿ ಖಡ್ಗ ಮತ್ತು ಅಭಯ ಹಸ್ತದಂತೆ ಇದೆ. ಶಿಲ್ಪದ ಮುಖದಲ್ಲಿ ವಿಶಾಲವಾದ ನೇತ್ರಗಳು, ಕರ್ಣಕುಂಡಲಗಳು ತಲೆಯ ಮೇಲೆ ಕರಂಡ ಮಕುಟವಿದೆ. ಒಂದರ ಮೇಲೊಂದರಂತೆ ಸರ್ಪಗಳು ಕೆಳಭಾಗದಲ್ಲಿ ಸುತ್ತಿದ್ದು, ಎರಡು ಸರ್ಪವು ಹೆಡೆಯನ್ನು ಬಿಚ್ಚಿರುವುದು, ಹಣೆಯ ಮೇಲೆ ತಿಲಕವಿದೆ. ಎಡಬಲದಲ್ಲಿ ಅಲಂಕಾರಯುಕ್ತ ಚಾಮರಧಾರಣಿಯರಿದ್ದಾರೆ. ಇದರ ಪಕ್ಕದಲ್ಲಿ ಶಾಸನದ್ದು, ಅದು ತೃಟಿತವಾಗಿದೆ.

**ಇತರೆ ಶಿಲ್ಪಗಳು**

**ಯತಿಯ ಶಿಲ್ಪ**

ಊರು : ಅಂಬಳಿ

ಕಾಲ : ಸುಮಾರು ೧೧ನೇ ಶತಮಾನ

ಸ್ಥಳ : ಕುಂಬಾರ ವೀರಭದ್ರಪ್ಪನವರ ಹೊಲದಲ್ಲಿ, ಕ್ಯಾಂಪ್ (ಬೇವೂರು ರಸ್ತೆ)

ಶಿಲೆ : ಕಪ್ಪು ಮಿಶ್ರಿತ ಶಿಲೆ

ಅಂಬಳಿ ಗ್ರಾಮದ ಪೂರ್ವಕ್ಕೆ ಇರುವ ಕ್ಯಾಂಪ್ (ಬೇವೂರು ರಸ್ತೆ)ನ ಉತ್ತರ ದಿಕ್ಕಿನಲ್ಲಿರುವ ಕುಂಬಾರ ವೀರಭದ್ರಪ್ಪನವರ ಹೊಲದಲ್ಲಿ, ಸುಮಾರು ೧೧ನೇ ಶತಮಾನದ ಕಲ್ಯಾಣ ಚಾಲುಕ್ಯರ ಕಾಲದ ಯತಿಯ ಶಿಲ್ಪವು, ೧೨-೧೩ ವರ್ಷಗಳ ಹಿಂದೇ ಹೊಲವನ್ನು ಉಳುಮೆ ಮಾಡುವಾಗ ಸಿಕ್ಕಿರುವ ಈ ಉಬ್ಬುಶಿಲ್ಪವು, ದೇವರಿಗೆ ಕೈಮುಗಿದು ಬೇಡಿಕೊಳ್ಳುವಂತೆ ಕಾಣುತ್ತದೆ. ತಲೆಯ ಮೇಲೆ ಕೀರಿಟವಿದೆ, ಕಿವಿಯಲ್ಲಿ ಒಲ್ಲೆ, ಕೊರಳಲ್ಲಿ ಕಂಠಹಾರ, ಕೈಖಡ್ಗ, ಕಾಲ್ಕಡಗಳಿದ್ದು ತ್ರಿಭಂಗಿಯಲ್ಲಿ ನಿಂತಿದ್ದಾನೆ. ಬಲಗೈಯಲ್ಲಿ ದೇವರ ಕೊಲನ್ನು ಹಿಡಿದಿರುವುದು ಕಂಡುಬರುತ್ತದೆ.

**ಬ್ರಹ್ಮ, ಶಿವ, ವಿಷ್ಣು**

ಕಲ್ಲೇಶ್ವರ ದೇವಾಲಯದ ಅಂತರಾಳ ದ್ವಾರಬಾಗಿಲಿನ ಮೇಲ್ಭಾಗದ ಪಟ್ಟಿಕೆಯಲ್ಲಿ ಬ್ರಹ್ಮ, ಶಿವ, ವಿಷ್ಣುವಿನ ಉಬ್ಬುಶಿಲ್ಪಗಳಿವೆ. ಇವು ಕಲ್ಯಾಣ ಚಾಲುಕ್ಯರ ೧೧ನೇ ಶತಮಾನದ ಪೂರ್ವಾರ್ಧದಲ್ಲಿ ಕಪ್ಪು ನೀಲಿಛಾಯೆಯ ಕಲ್ಲಿನಲ್ಲಿ ನಿರ್ಮಿಲಾಗಿದೆ. ಶಿವನು ಚತುರ್ಭುಜಧಾರಿ ಜಟೆಯು ಕೀರಿಟ ರೀತಿಯಲ್ಲಿದ್ದು ಕೊರಳಿನಲ್ಲಿ ಕಂಠಹಾರಗಳು, ಹಾವು ಹೆಡೆ ಎತ್ತಿರುವಂತೆ, ಕಿವಿಯಲ್ಲಿ ಓಲೆ, ಸೊಂಟಪಟ್ಟಿ, ಕೈಯಲ್ಲಿ ಕೈಗಡಗ, ಕಾಲಿನಲ್ಲಿ ಕಾಲ್ಗಡಗ, ಉದರಬಂಧ, ಯಜ್ಞೋಪವೀತವಿದ್ದು ಬಲಗೈಯು ಅಭಯ ಹಸ್ತವಾಗಿದ್ದು, ಹಿಂದಿನ ಕೈಯಲ್ಲಿ ತ್ರಿಶೂಲವಿದೆ. ಎಡಗೈಯು ಮುದ್ರಾಸನದಲ್ಲಿದ್ದು ಹಿಂದಿನ ಕೈಯಲ್ಲಿ ಶಂಕವಿದೆ. ಈ ಮೂರ್ತಿಯ ಬಲಗಡೆ

ಬ್ರಹ್ಮನು ನಿಂತಿರುವ ಭಂಗಿಯಲ್ಲಿದ್ದು ತ್ರಿಮುಖಧಾರಿಯಾಗಿದೆ. ತಲೆ ಮೇಲೆ ಕಿರೀಟವಿದೆ ಹಾಗೂ ಮುಖದಲ್ಲಿ ಗಡ್ಡವಿದ್ದು, ಚತುರ್ಭುಜವನ್ನು ಹೊಂದಿದೆ. ಕೊರಳಿನಲ್ಲಿ ಹಾರ, ಕಿವಿಯಲ್ಲಿ ಓಲೆ, ಕೈಗಳಲ್ಲಿ ಕೈಗಡಗ, ಸೊಂಟಪಟ್ಟಿ, ಕಾಲಿನಲ್ಲಿ ಕಾಲ್ಗಡಗ, ಕೊರಳಿನಿಂದ ಮಂಡಿಯವರೆಗೆ ರುದ್ರಾಕ್ಷಿ ಮಾಲೆ, ಬಲ ಮುಂಗೈಯಲ್ಲಿ ರುದ್ರಾಕ್ಷಿ ಜಪಮಾಲೆಯಿದೆ, ಹಿಂದಿನ ಕೈಯಲ್ಲಿ ಲೇಖನಿ ಹಾಗೂ ಎಡ ಮುಂಗೈಯಲ್ಲಿ ಶಿವಲಿಂಗ, ಹಿಂಗೈಯಲ್ಲಿ ಶಂಕವಿದೆ. ಹಾಗೇ ಶಿವನ ಎಡಭಾಗದಲ್ಲಿ ವಿಷ್ಣುವು ನಿಂತಿರುವ ಭಂಗಿಯಲ್ಲಿದ್ದು ತಲೆಯ ಮೇಲೆ ಕಿರೀಟವಿದ್ದು, ಚತುರ್ಭುಜಧಾರಿಯಾಗಿ ಮೇಲಿನ ಬಲಗೈಯಲ್ಲಿ ಜಪಮಾಲೆ ಇದ್ದು ಅಭಯಹಸ್ತವಾಗಿದೆ, ಹಿಂದಿನ ಕೈಯಲ್ಲಿ ಶಂಕವಿದೆ, ಮೇಲಿನ ಎಡಗೈಯಲ್ಲಿ ಗದಾವನ್ನು ಹಿಡಿದು, ಹಿಂದಿನ ಎಡಗೈಯಲ್ಲಿ ಚಕ್ರವಿದೆ. ಕಿವಿಯಲ್ಲಿ ಕುಂಡಲಗಳು, ಕೊರಳಲ್ಲಿ ಕಂಠಸರ, ಮಣಿಸರ ಹಾಗೂ ವಿವಿಧ ಬಗೆಯ ಹಾರಗಳಿವೆ. ಹಾಗೇ ಉದರಬಂಧ, ಯಜ್ಞೋಪವೀತ, ಮೋಣ ಕಾಲದವರೆಗೆ ಇಳಿಬಿದ್ದ ಅಂಲಕಾರಯುಕ್ತ ಉಪವೀತ ಮತ್ತು ವೈಜಯಂತಿ ಮಾಲೆಯಿದೆ. ಕೈಗಳಲ್ಲಿ ಭುಜಕೀರ್ತಿ, ಕೇಯೂರ, ಕಡಗಗಳಿವೆ. ಸೊಂಟವನ್ನು ಸೊಂಟಪಟ್ಟಿಯಿಂದ ಬಿಗಿದು ಮುಂಭಾಗದಲ್ಲಿ ಗಂಟು ಬಟ್ಟೆಯನ್ನು ಸೇರಿಸುವಂತೆ ಮಧ್ಯೆ ಅರ್ಧಚಂದ್ರಕಾರದ ಇಳಿಬಟ್ಟೆಯಿಂದೆ ಮತ್ತು ಈ ಮೂರ್ತಿಶಿಲ್ಪಗಳ ಹಿಂದೆ ನೃತ್ಯಗಾರರು ವಿವಿಧ ಆಭರಣ, ಅಲಂಕೃತ ಬಟ್ಟೆಯನ್ನು ತೊಟ್ಟು ವಾದ್ಯವನ್ನು ಬಾರಿಸುತ್ತ ನೃತ್ಯ ಮಾಡುತ್ತಿರುವುದು ಕಂಡು ಬರುತ್ತದೆ.

## ೪.೪ ವೀರಗಲ್ಲು

ಆಂಗ್ಲ ಭಾಷೆಯ 'Hero stone' ಎಂಬುದಕ್ಕೆ ಕನ್ನಡದಲ್ಲಿ ಸಮಾನಾರ್ಥಕವಾಗಿ 'ವೀರಗಲ್ಲು' ಎಂಬ ಪದವನ್ನು ಬಳಸುವುದು ರೂಢಿಯಲ್ಲಿದೆ. ಇಲ್ಲಿ 'ವೀರ' ಮತ್ತು 'ಕಲ್ಲು' ಎಂಬ ಎರಡು ಪದಗಳು ಬಳಕೆಯಲ್ಲಿವೆ. 'ವೀರ' ಗುಣವಾಚಕವಾಗಿದ್ದು, ವ್ಯಕ್ತಿಯ 'ವಿಶಿಷ್ಟ ಸಾಧನೆ, ಶೌರ್ಯ, ಸಾಹಸ ಮುಂತಾದ ಗುಣಗಳನ್ನು ಸೂಚಿಸುತ್ತದೆ. 'ಕಲ್ಲು' ವಸ್ತುಸೂಚಕದಂತೆ ಬಳಕೆಯಾಗಿದೆ. ಅರಸನಿಗಾಗಿ, ಸಾಮ್ರಾಜ್ಯದ ರಕ್ಷಣೆಗಾಗಿ ಇಲ್ಲವೆ ಊರಿನ ಹಿತಕ್ಕಾಗಿ, ವೈರಿಗಳ ವಿರುದ್ಧ ಹೋರಾಡಿ ಮರಣ ಹೊಂದಿದ ವೀರನ ಸ್ಮರಣೆಗಾಗಿ ನೆಟ್ಟ ಶಿಲ್ಪ ಶಿಲಾಫಲಕಗಳು ಇಲ್ಲಿವೆ, ಲಿಪಿ ಸಹಿತ ಊರಿನವರೆಲ್ಲಾ ಸೇರಿ ಅವನ ಸ್ಮರಣೆಗಾಗಿ ಒಂದು ಕಲ್ಲನ್ನು ನಿಲ್ಲಿಸುತ್ತಿದ್ದರು.

ವೀರಗಲ್ಲುಗಳನ್ನು ನಿಲ್ಲಿಸುವುದರಿಂದ ಅವನ ಶೌರ್ಯ, ಸಾಹಸ ಲೋಕಕ್ಕೆ ತಿಳಿಯುತ್ತಿತ್ತು. ಹಾಗೂ ಮೃತಪಟ್ಟ ವೀರನಿಗೆ ಸ್ವರ್ಗಪ್ರಾಪ್ತಿ ಎಂಬ ನಂಬಿಕೆ ಸಾಮಾನ್ಯವಾಗಿತ್ತು. ವೀರಗಲ್ಲುಗಳನ್ನು ಮೃತಪಟ್ಟ ವ್ಯಕ್ತಿಯ ಹತ್ತಿರ ಸಂಬಂಧಿಗಳು, ಊರಿನ ಸಾರ್ವಜನಿಕರು ಇಲ್ಲವೆ ಇನ್ನು ಕೆಲವು ಸಂದರ್ಭಗಳಲ್ಲಿ ಸತ್ತ ವೀರನ ಹೆಂಡತಿ, ಮಕ್ಕಳಿಗಾಗಿ ಬದುಕಿ ಸಹಗಮನ ಮಾಡದೆಹಂಡಸಿಗಾಗಿ ವೀರಗಲ್ಲನ್ನು ನಿರ್ಮಿಸುತ್ತಿದ್ದಳು. ಇಂತಹ ವೀರಗಲ್ಲಗಳನ್ನು ಪೂಜಿಸುವ ಪದ್ಧತಿ ರೂಢಿಯಲ್ಲಿದ್ದು ಧೂಪ, ದೀಪ, ಕುಂಕುಮ, ಹೂ ಮುಂತಾದವುಗಳನ್ನು ಅರ್ಪಿಸಿ ಗೌರವ ಸಲ್ಲಿಸುತ್ತಿದ್ದರು.

ಅಧ್ಯಯನದ ಗ್ರಾಮದಲ್ಲಿ ವೀರಗಲ್ಲುಗಳು ಉದಾತ್ತ ಉದ್ದೇಶದಿಂದ ಮಾತೃಭೂಮಿಯ ರಕ್ಷಣೆಗಾಗಿ ಹೋರಾಡಿ ಮರಣ ಹೊಂದಿದ ವೀರರ ನೆನಪಿಗಾಗಿ ನಿಲ್ಲಿಸಿದ ಸ್ಮಾರಕ ಶಿಲ್ಪಗಳಾಗಿವೆ. ಅವು ತುರುಗೋಳ್ ವೀರಗಲ್ಲುಗಳು, ಪೆಣ್ಬುಯ್ಯಲ್ ವೀರಗಲ್ಲು, ವೀರಮಾಸ್ತಿಗಲ್ಲು, ಆತ್ಮಬಲಿ ಕಲ್ಲು ಎಂದು ಅಧ್ಯಯನ ಮಾಡಲಾಗಿದೆ.

## ತುರುಗೋಳ್ ವೀರಗಲ್ಲು

ತುರುಗೋಳ್ ವೀರಗಲ್ಲು ಸಾಮಾನ್ಯವಾಗಿ ಎರಡರಿಂದ ಆರು ಶಿಲ್ಪಪಟ್ಟಿಕೆಗಳನ್ನು ಒಳಗೊಂಡಿರುತ್ತವೆ. ಒಂದನೇ ಪಟ್ಟಿಕೆಯಲ್ಲಿ ವೀರ ಮತ್ತು ವೈರಿಗಳ ಮಧ್ಯದಲ್ಲಿ ಪರಸ್ಪರ ಜರುಗುತ್ತಿರುವ ಯುದ್ಧದ ನಿರೂಪಣೆ ಮತ್ತು ವೀರನ ಹಿಂಭಾಗದಲ್ಲಿ ಪ್ರಾಣಿ(ಆಕಳು, ಎತ್ತು)ಗಳ ಚಿತ್ರಣ ಇರುತ್ತದೆ.ಎರಡನೇ ಪಟ್ಟಿಕೆಯಲ್ಲಿ ವೈರಿಗಳೊಂದಿಗೆ ಹೋರಾಡುತ್ತ ವೀರ ಮರಣವನ್ನಪ್ಪಿದ ವೀರನನ್ನು ದೇವಲೋಕದ ಅಪ್ಸರೆಯರು ಪುಷ್ಪಕ ವಿಮಾನದಲ್ಲಿ ಇಲ್ಲವೇ ಕಂಠಾಶ್ಲೇಷ ಭಂಗಿಯಲ್ಲಿ ಹೊತ್ತುಕೊಂಡು ದೇವಲೋಕಕ್ಕೆ ಕರೆದೊಯ್ಯುತ್ತಿರುವ ಚಿತ್ರಣ ಇರುತ್ತದೆ. ಮೂರನೆಯ ಪಟ್ಟಿಕೆ ದೇವಲೋಕದ ಪ್ರತಿರೂಪದಲ್ಲಿರುತ್ತದೆ. ಅದರಲ್ಲಿ ವೀರನು ವೀರ ಮರಣವನ್ನಪ್ಪಿ ಶೈವನಾಗಿದ್ದರೆ ಶಿವಲಿಂಗ ವೈಷ್ಣವನಾಗಿದ್ದರೆ ವಿಷ್ಣು ಜೈನನಾಗಿದ್ದರೆ ತೀರ್ಥಂಕರನ ಸನ್ನಿಧಿಯಲ್ಲಿ ಅಂಜಲಿ ಮುದ್ರಾಸಕ್ತನಾಗಿ ಆಸೀನನಾಗಿದ್ದು, ಪಾರ್ಶ್ವಗಳಲ್ಲಿ ಪೂಜೆಯಲ್ಲಿ ನಿರತನಾದ ಯತಿ, ಕೆಲವು ಸಲ ಆಯಾ ಧರ್ಮದ ಸಂಕೇತ ಮತ್ತು ಸೂರ್ಯ ಚಂದ್ರರ ಉಬ್ಬುಶಿಲ್ಪಗಳ ನಿರೂಪಣೆಗಳಿರುತ್ತವೆ.

ಸಂಖ್ಯೆ : ೦೧

ಹೆಸರು : ತುರುಗೋಳ್ ವೀರಗಲ್ಲು

ಸ್ಥಳ : ಆಂಜನೇಯ ದೇವಾಲಯದ ತಡೆಗೋಡೆಯಲ್ಲಿ

ಕಾಲ : ೧೧ನೇ ಶತಮಾನ

ರಾಜವಂಶ : ಕಲ್ಯಾಣ ಚಾಲುಕ್ಯ

ಶಿಲೆ : ಕಪ್ಪು ನಾರು ಶಿಲೆ

ಆಂಜನೇಯ ದೇವಾಲಯದ ಬಲಭಾಗದ ಆವರಣದ ಗೋಡೆಯಲ್ಲಿರುವ ಕಲ್ಯಾಣ ಚಾಲುಕ್ಯರ ಕಾಲದ ತುರುಗೋಳ್ ವೀರಗಲ್ಲಿನ ಮೊದಲ ಪಟ್ಟಿಕೆಯಲ್ಲಿ ವೀರರು ಗೋವು ಕಳ್ಳರ ವಿರುದ್ಧ ಪರಸ್ಪರ ಹೋರಾಡುತ್ತಿರುವಾಗ ಗೋವುಗಳು ಬಾಲ ಎತ್ತಿಕೊಂಡು ಚೆಲ್ಲಾಪಿಲ್ಲಿಯಾಗಿ ಓಡುತ್ತಿರುವ ದೃಶ್ಯವಿದ್ದು, ಅದರಲ್ಲಿ ವೀರರಿಬ್ಬರು ಪರಸ್ಪರ ಬೆನ್ನು ಮುಖವಾಗಿ ಗೋವು ಕಳ್ಳರ ವಿರುದ್ಧ ಹೋರಾಡುವಾಗ ಕಳ್ಳರು ಬಿಟ್ಟಿರುವ ಬಾಣಗಳು ವೀರರಿಬ್ಬರ ದೇಹಕ್ಕೆ ನಾಟಿವೆ. ಈ ಹೋರಾಟದಲ್ಲಿ ಗೋವುಗಳನ್ನು ರಕ್ಷಿಸಿರುವುದು ಕಂಡುಬರುತ್ತದೆ ಎರಡನೇಯ ಪಟ್ಟಿಕೆಯಲ್ಲಿ ವೀರರಿಬ್ಬರನ್ನು ಅಪ್ಸರೆಯರು ಸ್ವರ್ಗಕ್ಕೆ ಕೊಂಡೊಯ್ಯುವಂತೆ ಚಿತ್ರಿಸಲಾಗಿದೆ. ಮೂರನೇಯ ಪಟ್ಟಿಕೆಯಲ್ಲಿ ಶಿವಲಿಂಗಕ್ಕೆ ಯತಿಯು ಪೂಜೆಯನ್ನು ಮಾಡುತ್ತಿರುವಂತೆ ಹಾಗೂ ವೀರರಿಬ್ಬರು ಸ್ವರ್ಗದಲ್ಲಿ ಅಂಜಲಿ ಮುದ್ರೆಯ ಪದ್ಮಾಸನದಲ್ಲಿ ಕುಳಿತಿರುವಂತೆ ಚಿತ್ರಿಸಲಾಗಿದೆ.

ಸಂಖ್ಯೆ : ೦೨

ಹೆಸರು : ತುರುಗೋಳ್ ವೀರಗಲ್ಲು

ಸ್ಥಳ : ಆಂಜನೇಯ ದೇವಾಲಯ ಆವರಣದ ಗೋಡೆಯ ಹೋರಾಗಿನ ಭಾಗದಲ್ಲಿ

ಕಾಲ : ೧೨ನೇ ಶತಮಾನ

ರಾಜವಂಶ : ಕಲ್ಯಾಣ ಚಾಲುಕ್ಯ

ಶಿಲೆ : ಕಪ್ಪು ಬಳಪದ ಶಿಲೆ

ಆಂಜನೇಯ ದೇವಾಲಯದ ಬಲಭಾಗದ ಆವರಣದ ಗೋಡೆಯ ಹೊರಭಾಗದಲ್ಲಿರುವ ಕಲ್ಯಾಣ ಚಾಲುಕ್ಯರ ಕಾಲದ ತುರುಗೋಳ್ ವೀರಗಲ್ಲಿನ ಮೊದಲ ಪಟ್ಟಿಕೆಯಲ್ಲಿ ವೀರನು ಎದುರಾಳಿಗಳನ್ನು ತನ್ನ ಕೈಯಲ್ಲಿರುವ ಆಳೆತ್ತರದ ಬಿಲ್ಲನ್ನು ಹೂಡಿರುವ ದೃಶ್ಯ ಹಾಗೂ ಅವನ ಹಿಂಭಾಗದಲ್ಲಿ ಗೋವುಗಳಿರುವ ದೃಶ್ಯ. ಅದಕ್ಕೆ ಪ್ರತಿಯಾಗಿ ಎದುರಾಳಿಗಳು ಸಹ ಬಿಲ್ಲನ್ನು ಹೂಡಿ ಮುಂದಾಗಿರುವುದು ಹಾಗೂ ಎರಡು ಗೋವುಗಳು ಸತ್ತು ಹೆಣವಾಗಿ ಬಿದ್ದಿರುವಂತೆಯೂ ಚಿತ್ರಿಸಲಾಗಿದೆ. ಎರಡನೆಯ ಪಟ್ಟಿಕೆಯಲ್ಲಿ ಅಪ್ಸರೆಯರು ವೀರನನ್ನು ಸ್ವರ್ಗಕ್ಕೆ ಕೊಂಡೊಯ್ಯುವಂತೆ ಮತ್ತು ಮೂರನೆಯ ಪಟ್ಟಿಕೆಯಲ್ಲಿ ಶಿವಲಿಂಗಕ್ಕೆ ಯತಿಯು ಪೂಜೆಯನ್ನು ಮಾಡುತ್ತಿರುವಂತೆ, ವೀರನು ಅಂಜಲಿ ಮುದ್ರೆಯಲ್ಲಿ ಪದ್ಮಾಸನದಲ್ಲಿ ಕುಳಿತಿರುವಂತೆ ಚಿತ್ರಿಸಲಾಗಿದೆ.

ಸಂಖ್ಯೆ : ೦೩

ಹೆಸರು : ತುರುಗೋಳ್ ವೀರಗಲ್ಲು

ಸ್ಥಳ : ಆಂಜನೇಯ ದೇವಾಲಯ ಆವರಣದ ಗೋಡೆಯ ಹೋರಾಗಿನ ಭಾಗದಲ್ಲಿ

ಕಾಲ : ೧೨ನೇ ಶತಮಾನ

ರಾಜವಂಶ : ಕಲ್ಯಾಣ ಚಾಲುಕ್ಯ

ಶಿಲೆ : ಕಪ್ಪು ಬಳಪದ ಶಿಲೆ

ಆಂಜನೇಯ ದೇವಾಲಯದ ಬಲಭಾಗದ ಆವರಣದ ಗೋಡೆಯ ಹೊರಭಾಗದಲ್ಲಿರುವ ಕಲ್ಯಾಣ ಚಾಲುಕ್ಯರ ಕಾಲದ ತುರುಗೋಳ್ ವೀರಗಲ್ಲಿನ ಮೊದಲ ಪಟ್ಟಿಕೆಯಲ್ಲಿ ವೀರನು ಎದುರಾಳಿಗಳನ್ನು ತನ್ನ ಕೈಯಲ್ಲಿರುವ ಆಳೆತ್ತರದ ಬಿಲ್ಲನ್ನು ಹೂಡಿ ಬಾಣವನ್ನು ತಗೆಯುತ್ತಿರುವ ದೃಶ್ಯ ಹಾಗೂ ಅವನ ಹಿಂಭಾಗದಲ್ಲಿ ನಾಲ್ಕು ಗೋವುಗಳಿರುವ ದೃಶ್ಯ. ಅದಕ್ಕೆ ಪ್ರತಿಯಾಗಿ ಎದುರಾಳಿಗಳು ಸಹ ಬಿಲ್ಲನ್ನು ಹೂಡಿ ಮುಂದಾಗಿರುವುದು ಮತ್ತು ವೀರನು ತುರುಬನ್ನು ಕಟ್ಟಿಕೊಂಡಿದ್ದು, ಕವಿಯಲ್ಲಿ ಒಲೆ, ಕೈಪಟ್ಟಿ, ಕೈಕಡಗ, ಕಾಲ್ಕಡಗ, ಕಚ್ಚೆಪಂಜೆಯನ್ನು ಉಟ್ಟಿರುವುದು ಚಿತ್ರಿಸಲಾಗಿದೆ. ಎರಡನೆಯ ಪಟ್ಟಿಕೆಯಲ್ಲಿ ಅಪ್ಸರೆಯರು ಸ್ವರ್ಗಕ್ಕೆ ಕೊಂಡೊಯ್ಯುವಂತೆ ಮತ್ತು ಮೂರನೆಯ ಪಟ್ಟಿಕೆಯಲ್ಲಿ ಶಿವಲಿಂಗವಿದೆ. ವೀರನು ಅಂಜಲಿ ಮುದ್ರೆಯಲ್ಲಿ ಪದ್ಮಾಸನದಲ್ಲಿ ಕುಳಿತಿರುವಂತೆ ಚಿತ್ರಿಸಲಾಗಿದೆ.

ಸಂಖ್ಯೆ : ೦೪

ಹೆಸರು : ತುರುಗೋಳ್ ವೀರಗಲ್ಲು

ಸ್ಥಳ : ಆಂಜನೇಯ ದೇವಾಲಯ ಆವರಣದ ಗೋಡೆಯಲ್ಲಿ

ಕಾಲ : ೧೨ನೇ ಶತಮಾನ

ರಾಜವಂಶ : ಕಲ್ಯಾಣ ಚಾಲುಕ್ಯ

ಶಿಲೆ : ಕಪ್ಪು ಬಳಪದ ಶಿಲೆ

ಆಂಜನೇಯ ದೇವಾಲಯದ ಬಲಭಾಗದ ಆವರಣದ ಗೋಡೆಯಲ್ಲಿರುವ ಕ್ರಿ.ಶ. ೧೨ನೆಯ ಶತಮಾನದ ಕಲ್ಯಾಣ ಚಾಲುಕ್ಯರ ಕಾಲದ ತುರುಗೋಳ್ ವೀರಗಲ್ಲಿನಲ್ಲಿ ಮೂರು ಪಟ್ಟಿಕೆಗಳಿದ್ದು, ಮೊದಲ ಪಟ್ಟಿಕೆಯಲ್ಲಿ ವೀರನು ಎದುರಾಳಿಗಳನ್ನು ತನ್ನ ಕೈಯಲ್ಲಿರುವ ಆಳೆತ್ತರದ ಬಿಲ್ಲನ್ನು ಹೂಡಿರುವ ದೃಶ್ಯ ಹಾಗೂ ಅವನ ಹಿಂಭಾಗದಲ್ಲಿ ನಾಲ್ಕು ಗೋವುಗಳು ಒಂದರ ಪಕ್ಕದಲ್ಲಿ ಒಂದರಂತೆ ನಿಂತಿರುವ ದೃಶ್ಯ. ಅದಕ್ಕೆ ಪ್ರತಿಯಾಗಿ ಎದುರಾಳಿಯು ಸಹ ಬಿಲ್ಲನ್ನು ಹೂಡಿ ಮುಂದಾಗಿರುವುದು ಚಿತ್ರಿಸಲಾಗಿದೆ. ಎರಡನೆಯ ಪಟ್ಟಿಕೆಯಲ್ಲಿ ಅಪ್ಸರೆಯರು ವೀರನನ್ನು ಸ್ವರ್ಗಕ್ಕೆ ಕೊಂಡೊಯ್ಯುತ್ತಿರುವಂತೆ ಮತ್ತು ಮೂರನೆಯ ಪಟ್ಟಿಕೆಯಲ್ಲಿ ಶಿವಲಿಂಗವಿದೆ, ಪಕ್ಕದಲ್ಲಿ ವೀರನು ಸ್ವರ್ಗದಲ್ಲಿ ಅಂಜಲಿ ಮುದ್ರೆಯ ಪದ್ಮಾಸನದಲ್ಲಿ ಕುಳಿತಿರುವಂತೆ ಚಿತ್ರಿಸಲಾಗಿದೆ.

## ಪೆಣ್ಬುಯ್ಯಲ್

ಪೆಣ್ಬುಯ್ಯಲ್ ಎಂದರೆ ಹೆಣ್ಣಿನ ಆರ್ತಧ್ವನಿ ಎಂದರ್ಥ[೨] ನೆರೆರಾಜ್ಯದ ಅಥವಾ ನೆರೆ ಗ್ರಾಮದ ದಾಳಿಕಾರರು ಕದನಕ್ಕೆ ಬಂದು ಹೆಣ್ಣು ಮಕ್ಕಳನ್ನು ಮಾನಭಂಗಕ್ಕೂ ತೊಡಗುತ್ತಿದ್ದರು. ಅಥವಾ ಸೀರೆ ಎಳೆಯುವುದರ ಮೂಲಕ ಯುದ್ಧ ಸಾರುತ್ತಿದ್ದರು. ಇಂತಹ ಸಮಯದಲ್ಲಿ ಹೆಣ್ಣು ಮಕ್ಕಳ ರಕ್ಷಣೆಗೆ ಅಥವಾ ಸ್ತ್ರೀ ವಿಮೋಚನೆಗೆ ಹೋರಾಡುತ್ತಿದ್ದರು. ಅಂತಹ ಯುದ್ಧದಲ್ಲಿ ವೀರರು ಮರಣ ಹೊಂದುತ್ತಿದ್ದರು. ಇವರ ನೆನಪಿಗೆ ವೀರಗಲ್ಲುಗಳನ್ನು ಅಥವಾ ಸ್ಮಾರಕಗಳನ್ನು ನೆಡುತ್ತಿದ್ದರು. ಇದನ್ನೇ ಪೆಣ್ಬುಯ್ಯಲ್ ಎಂದು ಕರೆಯುತ್ತಾರೆ.

ಸಂಖ್ಯೆ : ೦೫

ಹೆಸರು : ಪೆಣ್ಬುಯ್ಯಲ್ ವೀರಗಲ್ಲು

ಸ್ಥಳ : ಆಂಜನೇಯ ದೇವಾಲಯ ಆವರಣದ ಗೋಡೆಯಲ್ಲಿ

ಕಾಲ : ೧೨ನೇ ಶತಮಾನ

ರಾಜವಂಶ : ಕಲ್ಯಾಣ ಚಾಲುಕ್ಯರು

ಶಿಲೆ : ಕಪ್ಪು ನಾರು ಶಿಲೆ

ಇದೆ ಗ್ರಾಮದ ಆಂಜನೇಯ ದೇವಾಲಯ ಆವರಣದ ಗೋಡೆಯಲ್ಲಿರುವ ಪೆಣ್ಬುಯ್ಯಲ್ ವೀರಗಲ್ಲುವು, ಕಲ್ಯಾಣ ಚಾಲುಕ್ಯರ ಕಾಲದ ಸುಮಾರು ೧೧-೧೨ನೇ ಶತಮಾನದ ಕಲ್ಲಾಗಿದ್ದು. ಈ ಕಲ್ಲಿನ ಮೊದಲ ಪಟ್ಟಿಕೆಯಲ್ಲಿ ವೀರನು ಒಬ್ಬ ಎದುರಾಳಿಯನ್ನು ತನ್ನ ಕಾಲಿನ ಕೆಳಗೆ ಬೀಳಿಸಿಕೊಂಡಿದ್ದು, ಮತ್ತೊಬ್ಬ ಎದುರಾಳಿಯ ವಿರುದ್ಧ ಎಡಗೈಯಿಂದ ಬಿಲ್ಲನ್ನು ಹೂಡಿ ಬಲಗೈಯಿಂದ ಬಾಣವನ್ನು ತನ್ನ ಬತ್ತಳಿಕೆಯಿಂದ ತೆಗೆಯುತ್ತಿರುವುದ, ಅದೇ ರೀತಿಯಲ್ಲಿ ಎದುರಾಳಿಯ ಸಹ ಬಿಲ್ಲನ್ನು ಹೂಡಿ ಬಾಣವನ್ನು ಬಿಡುತ್ತಿರುವುದು ತಿಳಿಯುತ್ತದೆ. ವೀರನ ಹಿಂದೆ ಇಬ್ಬರು ಮಹಿಳೆಯು ದಿಬ್ಬದ ಮೇಲೆ ನಿಂತಿರುವಂತೆ, ಇವರು ಕಿವಿ ಒಲೆ, ಕಾಲ್ಕಡಗ, ಕೈಯಲ್ಲಿ ಬಳೆಗಳೆನ್ನು, ಧರಿಸಿದ್ದಾರೆ ತಲೆ ಮೇಲೆ ಕೂದಲು ಅಲಂಕೃತವಾಗಿವೆ. ವೀರನು ಕಾಲ್ಕಡಗ, ಸೊಂಟಕ್ಕೆ ಪಂಜೆಯನ್ನು, ತಲೆಯಲ್ಲಿ ತುರುಬನ್ನು ಕಟ್ಟಿಕೊಂಡಿದ್ದಾನೆ. ಎರಡನೆ ಪಟ್ಟಿಕೆಯಲ್ಲಿ ಅಪ್ಸರೆಯರು ವೀರನನ್ನು ಸ್ವರ್ಗಕ್ಕೆ ಕೊಂಡೊಯ್ಯುತ್ತಿರುವಂತೆ ಹಾಗೂ ಮೂರನೆಯ ಪಟ್ಟಿಕೆಯಲ್ಲಿ ಶಿವಲಿಂಗದ ಪಕ್ಕದಲ್ಲಿ ವೀರನು ಅಂಜಲಿ ಮುದ್ರೆಯಲ್ಲಿ ಪದ್ಮಾಸನದಲ್ಲಿ ಕುಳಿತಿರುವಂತೆ ಚಿತ್ರಿಸಲಾಗಿದೆ. ಈ ಗ್ರಾಮದ ಹೆಣ್ಣುಮಕ್ಕಳನ್ನು ಕದಿಯಲು ಅಥವಾ ಹೆಣ್ಣುಮಕ್ಕಳ ಮಾನಕಳೆಯಲು ಬಂದ ಎದುರಾಳಿಗಳ ವಿರುದ್ಧ ಹೋರಾಡಿ ಹೆಣ್ಣುಮಕ್ಕಳ ಮಾನ, ಪ್ರಾಣವನ್ನು ಕಾಪಾಡಿ ತನ್ನ ಪ್ರಾಣವನ್ನು ಕಳೆದುಕೊಂಡ ವೀರನ ನೆನಪಿಗಾಗಿ ನಿರ್ಮಿಸಿದ ಕಲ್ಲೆ ಈ ಪೆಣ್ಬುಯ್ಯಲ್ ವೀರಗಲ್ಲಾಗಿದೆ.

## ವೀರಮಾಸ್ತಿಗಲ್ಲು

ಸಂಖ್ಯೆ : ೦೬

ಹೆಸರು : ವೀರಮಾಸ್ತಿಗಲ್ಲು

ಸ್ಥಳ : ಆಂಜನೇಯ ದೇವಾಲಯ ಆವರಣದ ಗೋಡೆಯಲ್ಲಿ

ಕಾಲ : ೧೬-೧೭ನೇ ಶತಮಾನ

ರಾಜವಂಶ : ವಿಜಯನಗರ ಕಾಲದ

ಶಿಲೆ : ಹಸಿರು ಕಪ್ಪು ಮಿಶ್ರಿತ ಶಿಲೆ

ಈ ಗ್ರಾಮದ ಆಂಜನೇಯ ದೇವಾಲಯ ಆವರಣದ ಗೋಡೆಯಲ್ಲಿರುವ ವೀರಮಾಸ್ತಿಗಲ್ಲು ವಿಶಿಷ್ಟವಾಗಿದ್ದು, ಇದು ವಿಜಯನಗರ ಕಾಲದ್ದಾಗಿದೆ. ವೀರನು ಎಡಗೈಯಲ್ಲಿ ಬಿಲ್ಲನ್ನು, ಬಲಗೈಯಲ್ಲಿ ಸೊಂಟದಲ್ಲಿ ಇರುವ ಖಡ್ಗವನ್ನು ಹಿಡಿದಿರುವಂತೆ, ಕಿವಿಯಲ್ಲಿ ಕಿವಿಯೊಲೆ, ಕೊರಳಲ್ಲಿ ಹಾರವನ್ನು, ಕೈಯಲ್ಲಿ ಕೈಗಡಗ, ಕೈಪಟ್ಟಿ, ಕಾಲಿಗೆ ಕಾಲ್ಕಡಗವನ್ನು, ಕಚ್ಚೆಪಂಜಿಯನ್ನು ಧರಿಸಿದ್ದಾನೆ. ತಲೆಯ ಕೂದಲಿನಿಂದ ತುರುಬನ್ನು ಕಟ್ಟಿಕೊಂಡಿದ್ದು, ವೀರನ ಹಿಂದೆ ಮಹಾಸತಿಯು ಎರಡು ಕೈಗಳನ್ನು ಮೇಲಕ್ಕೆ ಎತ್ತಿದ್ದು ಬಲಗೈಯಲ್ಲಿ ನಿಂಬೆಹಣ್ಣು. ಎಡಗೈಯಲ್ಲಿ ಕನ್ನಡಿಯನ್ನು ಹಿಡಿದಿದ್ದು, ಕೊರಳಿಗೆ ಅಲಂಕಾರಿಕವಾದ ಮಣಿಹಾರವನ್ನು ಧರಿಸಿದ್ದು, ಸೊಂಟಕ್ಕೆ ಪಟ್ಟಿಕಟ್ಟಿ ಕೊಂಡಿದ್ದು, ಕಿವಿಗೆ ಅಲಂಕಾರಿಕ ಆಭರಣಗಳನ್ನು, ಕೈಯಲ್ಲಿ ಬಳೆಯಂತ ಆಭರಣಗಳು, ಕಾಲುಗಳಿಗೆ ಕಡಗವನ್ನು ಧರಿಸಿದ್ದು, ತಲೆಗೆ ಮುಡಿಕಟ್ಟಿ, ಮುಖವನ್ನು ಅಲಂಕಾರ ಮಾಡಿರುವುದು

ಕಣ್ಣಿನ ಉಬ್ಬುಗಳಿಂದ ತಿಳಿಯುತ್ತದೆ. ಇಬ್ಬರ ಮುಂದೆ ಕುದುರೆಯ ಕಾಲುಗಳಿಗೆ ಕಾಲ್ಕಡಗ, ಕೊರಳಿಗೆ ಗಂಟೆ ಸರ, ಬೆನ್ನ ಮೇಲೆ ಬಣ್ಣ ಬಣ್ಣದ ಬಟ್ಟೆಯಿಂದ ಅಲಂಕಾರ ಗೊಂಡು ನಿಂತಿರುವುದು ವಿಶೇಷವಾಗಿದೆ.

## ಲಿಂಗಮುದ್ರೆಕಲ್ಲು

ವಿವಿಧ ದೇವಾಲಯಗಳಿಗೆ ಆಚಾರ್ಯರಿಗೆ, ಭೂಮಿಯನ್ನು ದಾನಮಾಡಿದ ತರುವಾಯ, ಆಭೂಮಿಯ ಸೀಮಾ ಚಕ್ಕು ಬಂದಿಯನ್ನ ಸೂಚಿಸಲು ಅದರ ನಾಲ್ಕು ದಿಕ್ಕುಗಳಲ್ಲಿ ಮೇರೆಗಲ್ಲುಗಳಾಗಿ ಲಿಂಗ ಮುದ್ರೆಗಲ್ಲುಗಳನ್ನು ನಿಲ್ಲಿಸಿದ ಉಲ್ಲೇಖಗಳು ದೊರಕಿವೆ.[೩೩] ಇವು ಸಾಮಾನ್ಯವಾಗಿ ೨ ರಿಂದ ೪ ಅಡಿಗಳಷ್ಟು ಎತ್ತರವಾಗಿರುತ್ತವೆ. ಇವುಗಳ ಮೇಲೆ ಶಿವಲಿಂಗವಿರುತ್ತವೆ. ಲಿಂಗದ ಇಕ್ಕೆಲಗಳಲ್ಲಿ ಸೂರ್ಯ-ಚಂದ್ರರ ಚಿತ್ರಣಗಳಿರುತ್ತವೆ. ಬಹುತೇಕ ಲಿಂಗ ಮುದ್ರೆಗಲ್ಲುಗಳ ಮೇಲೆ ಶಿವಲಿಂಗವನ್ನು ರೇಖೆಯಿಂದಲೇ ಚಿತ್ರಿಸಲಾಗಿರುತ್ತದೆ. ಕೆಲವೊಮ್ಮೆ ಕೆಳಭಾಗದಲ್ಲಿ ಶಾಸನಗಳಿರುತ್ತವೆ. ಕೆಲವೊಂದು ಲಿಂಗ ಮುದ್ರೆಗಲ್ಲುಗಳ ಮೇಲೆ ಶಾಸನಗಳು ಇರುವುದಿಲ್ಲ. ಕೆಲವೊಮ್ಮೆ ಶಿವಲಿಂಗದ ಒಂದು ಬದಿಯಲ್ಲಿ ಕರುವಿಗೆ ಹಾಲುಣಿಸುತ್ತಿರುವ ಹಸು ಮತ್ತೊಂದು ಬದಿಯಲ್ಲಿ ನಂದಿಯನ್ನು ಚಿತ್ರಿಸಲಾಗಿರುತ್ತದೆ. ಕೆಲವು ಲಿಂಗಮುದ್ರೆಗಲ್ಲುಗಳ ಮೇಲೆ ಈ ಮೇಲಿನ ಎಲ್ಲಾ ನಿರೂಪಣೆಗಳೊಂದಿಗೆ ಶಿವಲಿಂಗಕ್ಕೆ ಪೂಜೆ ಮಾಡುತ್ತಿರುವ ಯತಿ ಮತ್ತು ಅಂಜಲಿ ಮುದ್ರೆಯಲ್ಲಿ ಆಸೀನನಾದ ಭಕ್ತನನ್ನು, ಭೂಮಿಯನ್ನು ದಾನಮಾಡಿದ ವ್ಯಕ್ತಿಯನ್ನು ತೋರಿಸಲಾಗುತ್ತದೆ.

ಅಂಬಳಿ ಪ್ರದೇಶದ ಕ್ಷೇತ್ರಕಾರ್ಯದಲ್ಲಿ ಲಿಂಗಮುದ್ರೆಕಲ್ಲು ಗುರುತಿಸಿ ಛಾಯಾಚಿತ್ರವನ್ನು ಸಂಗ್ರಹಿಸಲಾಗಿದೆ. ಈ ಲಿಂಗಮುದ್ರೆಕಲ್ಲು ಅಂಬಳಿಯ ಪೂರ್ವ ದಿಕ್ಕಿಗೆ, ವಿರೂಪಾಕ್ಷಪ್ಪನ ಹೊಲದ ಮೇರೆಯಲ್ಲಿದೆ. ಇವು ಕಾಡ ಕಲ್ಲಿನಲ್ಲಿ ಕೆತ್ತಲಾಗಿದು ಒಂದರಲ್ಲಿ ಸೂರ್ಯ-ಚಂದ್ರರ ಮಧ್ಯದಲ್ಲಿ ಶಿವಲಿಂಗ ಚಿತ್ರವು ಇದೆ. ಮತ್ತೊಂದರಲ್ಲಿ ಸೂರ್ಯ-ಚಂದ್ರರ ಮಧ್ಯದಲ್ಲಿ ತ್ರಿಶೂಲವಿದ್ದು, ದಾನ ಮಾಡಿದ ವಿವರವನ್ನು ಲಿಪಿಯಲ್ಲಿ ತಿಳಿಸಲಾಗಿದೆ. ಇವು ವಿಜಯನಗರ ಕಾಲದ ಲಿಂಗಮುದ್ರೆಕಲ್ಲುಗಳಾಗಿವೆ. ಇನ್ನೊಂದು ಲಿಂಗಮುದ್ರೆಕಲ್ಲಿದ್ದು ಇದು ಕಲ್ಯಾಣ ಚಾಲುಕ್ಯರ ಕಾಲದ್ದಾಗಿರಬಹುದು, ಕಪ್ಪು ನೀಲಿಛಾಯ ಕಲ್ಲಿನಲ್ಲಿ ಸೂರ್ಯ-ಚಂದ್ರರ ಮಧ್ಯದಲ್ಲಿ ಶಿವಲಿಂಗದ ಚಿತ್ರವಿದೆ. ಇದೊಂದು ಭೂದಾನ ಮಾಡಿದ ಮೇರೆಯ ಕಲ್ಲಾಗಿದೆ.[೩೪]

## ಕೊನೆಟಿಪ್ಪಣಿಗಳು

೧. ಚನ್ನಬಸಪ್ಪ ಎಸ್. ಪಾಟೀಲ, ಕರ್ನಾಟಕ ಕೋಟೆಗಳು, ಸಂಪುಟ-೧, ಪು, ೧
೨. ಅದೇ, ಪು, ೪
೩. ಚನ್ನಬಸಪ್ಪ ಎಸ್. ಪಾಟೀಲ, ಮತ್ತು ವಿನೋದಾ ಪಾಟೀಲ, ಕರ್ನಾಟಕ ಶಾಸನಗಳ ಸಂಪುಟ-೨, ಬಳ್ಳಾರಿ ಜಿಲ್ಲೆಯ ಶಾಸನಗಳು, ಪು, ೧೫೫
೪. ಮಂಜನಾಯ್ಕ ಆರ್., ಕೂಡ್ಲಿಗಿ ಮತ್ತು ಹಗರಿಬೊಮ್ಮನಹಳ್ಳಿ ತಾಲೂಕುಗಳ ಪುರಾತತ್ವೀಯ ಅಧ್ಯಯನ,(ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧ) ಪು, ೧೭೬
೫. ಮಂಜನಾಯ್ಕ ಆರ್., ಪೂರ್ವೋಕ್ತಿ, ಪು, ೧೭೬
೬. ಅದೇ, ಪು, ೧೭೭
೭. ಅದೇ, ಪು, ೧೭೮
೮. ಅದೇ, ಪು, ೧೭೯
೯. ಅದೇ, ಪು, ೧೮೧
೧೦. ವಾಸುದೇವ ಬಡಿಗೇರ, ಪೂರ್ವೋಕ್ತಿ, ಪು, ೩೧೯
೧೧. ಮಂಜನಾಯ್ಕ ಆರ್., ಪೂರ್ವೋಕ್ತಿ, ಪು, ೧೮೫
೧೨. ಕ.ವಿ.ವಿ. ಕರ್ನಾಟಕ ದೇವಾಲಯ ಕೋಶ, ಬಳ್ಳಾರಿ ಜಿಲ್ಲೆ, ಪು, ೨೬೬
೧೩. ಮಂಜನಾಯ್ಕ ಆರ್., ಪೂರ್ವೋಕ್ತಿ, ಪು, ೧೯೯
೧೪. ಕನ್ನಡ ವಿಶ್ವವಿದ್ಯಾಲಯ, ಶಾಸನ ಸಂಪುಟ, ಪು, ೨೫೬
೧೫. ಅದೇ, ಪು, ೨೫೪
೧೬. ಅದೇ, ಪು, ೨೬೦
೧೭. ಅದೇ, ಪು, ೨೫೫
೧೮. ಚಿದಾನಂದ ಮೂರ್ತಿ ಎಂ., ಕರ್ನಾಟಕ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು, ೨೩೮
೧೯. ನಾಗರಾಜ ಮೈ.ನ. ಕರ್ನಾಟಕದಲ್ಲಿ ಪುರಾತನ ವಿದ್ಯಾಕೇಂದ್ರಗಳು, ಪು, ೧೨
೨೦. ಕರ್ನಾಟಕ ಶಾಸನ ಸಂಪುಟ-೨, ಪು, ೬೯
೨೧. ಕನ್ನಡ ವಿಶ್ವವಿದ್ಯಾಲಯ, ಶಾಸನ ಸಂಪುಟ-೧, ಪು, ೨೫೪
೨೨. ಅದೇ, ಪು, ೨೫೬
೨೩. ಅದೇ, ಪು, ೨೭೭
೨೪. ಅದೇ, ಪು, ೨೫೪
೨೫. ಕನ್ನಡ ವಿಶ್ವವಿದ್ಯಾಲಯ. ಶಾಸನ ಸಂಪುಟ-೨. ಪು. ೭೦
೨೬. ಅದೇ, ಪು, ೬೯
೨೭. Jagadish, measurement system in Karnataka, A.D.325 to1700, page
೨೮. ಕನ್ನಡ ವಿಶ್ವವಿದ್ಯಾಲಯ ಶಾಸನಗಳ ಸಂಪುಟ-೧, ಪು. ೨೫

೨೯. ಸುರೇಶ ಬಿ., ಚಿತ್ರದುರ್ಗ-ದಾವಣಗೆರೆ ಜಿಲ್ಲೆಗಳ ದೇವಾಲಯಗಳು, ಪು, ೨೩೫
೩೦. ತಿಪ್ಪೇರುದ್ರಸ್ವಾಮಿ ಹೆಚ್., ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಪು, ೫೨೮
೩೧. ಸುರೇಶ ಬಿ., ಪೂರ್ವೋಕ್ತ, ಪು, ೨೨೬
೩೨. ಕಲಬುರ್ಗಿ ಎಂ.ಎಂ., ಸಮಾಧಿ-ಬಲಿದಾನ-ವೀರಮರಣ ಸ್ಮಾರಕಗಳು, ಪು, ೮೦
೩೩. ಕೊಟ್ರಯ್ಯ ಸಿ.ಟಿ.ಎಂ., ಕ್ಷೇತ್ರ ಸೀಮಾ ನಿರ್ಣಯ, ಹೇಮಕೂಟ ಸಂ೨/೮, ಪು, ೩-೧೦
೩೪. ಕ್ಷೇತ್ರಕಾರ್ಯದ ಮಾಹಿತಿ

# ಅಧ್ಯಾಯ : ಐದು

## ನಂಬಿಕೆ ಮತ್ತು ಆಚರಣೆಗಳು

ಮನುಷ್ಯ ಆದಿಮಾನವ ಕಾಲದಿಂದಲೂ ನಂಬಿದ ಮತ್ತು ತತ್ಸಂಬಂಧ ಆಚರಣೆಗಳನ್ನು ರೂಢಿಯಾಗಿಸಿ ಕೊಂಡಿರುವುದು ಕಾಣುತ್ತಲೇ ಬಂದಿದ್ದೇವೆ. ದೇವತೆಗೂ, ಸಮಾಜಕ್ಕೂ ಇರುವ ಸಂಬಂಧ ಅಭಿನಯಗೊಳ್ಳುವ ಕ್ರಮದ ವಿವರಗಳೇ ಆಚರಣೆಗಳು. ಸಂಪ್ರದಾಯ ಅಂಗೀಕರಿಸಿದ ಧಾರ್ಮಿಕ ಮತ್ತು ಮಾಂತ್ರಿಕ ಆಚರಣೆಗಳ ಮೊತ್ತವೇ ಆಚರಣೆಗಳು ಎನ್ನಲಾಗಿದೆ.[೧] ನಂಬಿಕೆ ಆಚರಣೆಯ ಬೆನ್ನೆಲುಬು, ನಂಬಿಕೆಯ ಸಿದ್ಧಾಂತ ಆಚರಣೆಯನ್ನು ಮುಂದುವರಿಸಿಕೊಂಡು ಹೋಗುವಂತೆ ಮಾಡುತ್ತದೆ. ಆಚರಣೆ ಹುಟ್ಟುವ ಮುನ್ನ ಅಥವಾ ನಂತರ ಪುರಾಣಗಳು ಹುಟ್ಟಿಕೊಳ್ಳುತ್ತವೆ. ಇವು ಮುಗಿದು ಹೋದರೂ ಆಚರಣೆ ಮುಂದುವರಿಯುತ್ತಾ ಹೋಗುವುದನ್ನು ಕಾಣುತ್ತೇವೆ.

ಮತ ಧರ್ಮಗಳಿಗೆ ಸಂಬಂಧಿಸಿದಂತೆ ಅಗೋಚರ ದೈವಶಕ್ತಿಗಳ ಪ್ರೀತ್ಯರ್ಥವಾಗಿ ಮಾನವ ನಡೆಸುತ್ತಾ ಬಂದಿರುವ ಮತಾಚಾರಗಳಿಗೆ ಕರ್ಮವಿಧಿಗಳಿಗೆ ಈ ಹೆಸರಿದೆ. ಪುನರಾವರ್ತನೆ ಮತ್ತು ಸಾಮೂಹಿಕ ವೀಕ್ಷಣೆಯಿಂದ ಸಾಂಪ್ರದಾಯಿಕವಾಗಿ ಒಪ್ಪಿತವಾಗಿರುವ ಭೂತ, ವರ್ತಮಾನ ಮತ್ತು ಭವಿಷತ್ಯತ್ ಕಾಲಗಳಿಗೆ ಸಂಬಂಧಿಸಿದಂತೆ ಕಾರ್ಯಕಾರಣ ಸಂಬಂಧವನ್ನು ಸೂಚಿಸುವ ಕಲ್ಪನೆಯನ್ನೇ ನಂಬಿಕೆ ಎಂದು ಕರೆಯಬಹುದು. ನಂಬಿಕೆ ಮತ್ತು ಆಚರಣೆಗಳು ಒಂದು ಪ್ರದೇಶವು ಅಲ್ಲಿ ವಾಸಿಸುವ ಸಮುದಾಯಗಳಲ್ಲಿ ಜೀವನದ ಭಾಗವಾಗಿರುತ್ತದೆ.

ನಂಬಿಕೆ ಭೌತಿಕ ಸ್ವರೂಪದ ಆಚರಣೆಯಾಗಿದೆ. ಮಾನವ ಬದುಕಿನ ಶ್ರೇಯಸ್ಸಿಗಾಗಿ ಅಥವಾ ರೋಗ ನಿವಾರಣೆಗಾಗಿ ಇಲ್ಲವೇ ತನ್ನ ದಿನನಿತ್ಯದ ಕಾರ್ಯ ಚಟುವಟಿಕೆಗಳು ಸುಗಮವಾಗಿ ನೆರವೇರಿಸಿಕೊಳ್ಳಲು ತನಗೆ ಸಂಬಂಧಿಸಿದ ಕೆಲವು ವಿಧಿ-ವಿಧಾನ, ಪೂಜೆ, ಜಾತ್ರೆ, ಪರಸೆ, ಬಲಿ ಕಾರ್ಯದ ನಂಬಿಕೆ ಮತ್ತು ಆಚರಣೆ ಮಾಡುತ್ತಾ ಬಂದಿದ್ದಾನೆ. ಮಾನವನಷ್ಟೇ ಪಾರಂಪರಿಕ ಹಿರಿಮೆ, ಮಾನವ ಸಂಸ್ಕೃತಿಯದು. ಮಾನವನ ದೈನಂದಿನ ಬದುಕಿಗೆ ಗಾಳಿ, ಬೆಳಕು, ನೀರು, ಆಹಾರ, ಬಟ್ಟೆ, ವಸತಿ ಎಷ್ಟು ಮುಖ್ಯವೋ ನಂಬಿಕೆಯೂ ಅಷ್ಟೇ ಪ್ರಮುಖವಾಗಿದೆ.[೨] ನಂಬಿಕೆ ಆಚರಣೆಗಳು ಭೂಮಿಯ ಯಾವ ಪ್ರದೇಶವನ್ನು ಬಿಟ್ಟಿಲ್ಲ ಅವು ಸ್ಥಳೀಯವಾಗಿ ಭಿನ್ನರೂಪದಲ್ಲಿ ಗೋಚರಿಸುತ್ತವೆ. ಹಾಗೆ ಅಂಬಳಿ ಗ್ರಾಮದಲ್ಲಿ ಜನಸಮುದಾಯಗಳಿಂದ ರಚಿತವಾಗಿದೆ. ಲಿಂಗಾಯತ, ಕುಂಬಾರ, ಕಮ್ಮಾರ, ಬಡಿಗ, ಅಕ್ಕಸಾಲಿಗ, ಬಾರಿಕ, ದಲಿತ ಇತರೇ ಅಲ್ಪಸಂಖ್ಯಾತರಿಂದ ಅವರದೇ ಅದ ನಂಬಿಕೆ ಮತ್ತು ಆಚರಣೆಗಳ ನೆಲೆಯಲ್ಲಿ ಬದುಕಿದ್ದಾರೆ.

### ೫.೧ ಆಚರಣೆಗಳು

ಜಾನಪದ ಪ್ರಮುಖ ಪ್ರಕಾರಗಳಲ್ಲಿ ಒಂದಾದ ಈ ಆಚರಣೆಗಳು ಜಾನಪದರಲ್ಲಿ ಹಾಸು ಹೊಕ್ಕಾಗಿದೆ. ಇವು ಬಹು ಪುರಾತನದಿಂದಲೂ ಚಾಚು ತಪ್ಪದೇ ಆಚರಿಸುತ್ತಾ ಬಂದಿದ್ದಾರೆ. ಇವು

ವ್ಯಕ್ತಿಗೆ ಬೌದ್ಧಿಕ ಮತ್ತು ಭಾವನಾತ್ಮಕ ಭಕ್ತಿ, ಶ್ರದ್ಧೆ, ನಂಬಿಕೆ ಅತಿಯಾದಾಗ ಮಾರ್ಪಾಡುಗಳಾಗುವುದೇ ಆಚರಣೆ. ಪ್ರಸ್ತುತ ಅಂಬಳಿ ಗ್ರಾಮದಲ್ಲಿನ ಆಚರಣೆಗಳನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ.

**ಹೆಣ್ಣು ಮೈನೆರೆಯುವುದು**

ಭಾರತೀಯ ಸಂಪ್ರದಾಯದ ಪ್ರಕಾರ ಹೆಣ್ಣು ಮಕ್ಕಳು ೧೨ ರಿಂದ ೧೪ ವರ್ಷಗಳ ಅವಧಿಯಲ್ಲಿ ಮೈನೆರೆಯುತ್ತಾರೆ. ಇದನ್ನು ದೊಡ್ಡವಳಾದಳು, ಋತುಮತಿಯಾದಳು, ಹೊರಗಾದಳು ಇತ್ಯಾದಿಯಾಗಿ ಕರೆಯುವುದು ಇಲ್ಲಿ ಕಂಡುಬರುತ್ತದೆ. ಮಹಿಳೆಯರ ಬದುಕಿನಲ್ಲಿ ಮೈನೆರೆಯುವುದು ಒಂದು ಮುಖ್ಯಘಟ್ಟ. ಅವಳುಬಾಲ್ಯಾವಸ್ಥೆಯನ್ನು ಕಳೆದು ಪ್ರೌಢಾವಸ್ಥೆಗೆ ಸೇರುವ ಒಂದು ಸಂಕೇತ. ಅಂದರೆ ಅವಳು ಪ್ರಾಯ ಹೊಂದಿ ಮದುವೆಯಾಗಲು ಯೋಗ್ಯಳು. ಈ ಹಂತದಲ್ಲಿ ಅವಳು ಸಂತಾನೋತ್ಪತ್ತಿಗೆ ಸಿದ್ಧಳಾಗಿರುತ್ತಾಳೆ, ಪುರುಷನ ಜೊತೆಗೆ ಬದುಕನ್ನು ಆರಂಭಿಸುವುದಕ್ಕೆ ಅನುಮತಿ ದೊರೆಯುತ್ತದೆ.[೩]

ಅಂಬಳಿ ಗ್ರಾಮದಲ್ಲಿ ಹುಡುಗಿಯರು ಮೈನೆರೆದಾಗ ಅವಳನ್ನು ಸ್ನಾನದ ಮನೆಗೆ ಕರೆದುಕೊಂಡು ಹೋಗಿ ಸೋದರತ್ತೆಯಿಂದ ನೀರು ಹಾಕಿಸುತ್ತಾರೆ. ಅದೇ ರೀತಿ ಇನ್ನೂ ನಾಲ್ಕು ಜನ ಮುತ್ತೈದೆ ಸ್ತ್ರೀಯರು ನೀರು ಹಾಕುತ್ತಾರೆ. ಹೀಗೆ ಇದು ಮೂರು ದಿನಗಳ ಕಾಲ ನಡೆಯುತ್ತದೆ. ಈ ಸಂದರ್ಭದಲ್ಲಿ ಅವಳಿಗೆ ಕೆಲವು ನಿರ್ಬಂಧಗಳನ್ನು ವಿಧಿಸುತ್ತಾರೆ. ಮೈನೆರೆದ ಹುಡುಗಿ ದೇವರ ಮನೆಗೆ, ಅಡಿಗೆ ಮನೆಗೆ, ಹೋಗುವಂತಿಲ್ಲ. ೯ ಅಥವಾ ೧೧ನೇ ದಿನಗಳಲ್ಲಿ ಗಂಗೆಯ ಪೂಜೆ ಮಾಡಿಸಿ ಈ ನಿರ್ಬಂಧ ತೆಗೆಯುವುದು ಕಂಡುಬರುತ್ತದೆ.

**ದೇವದಾಸಿ ಪದ್ಧತಿ**

ಈ ಪದ್ಧತಿಯು ಅಂಬಳಿ ಗ್ರಾಮದಲ್ಲಿ ವಿಶೇಷವಾಗಿ ಕಂಡುಬರುತ್ತದೆ. ಕೆಳ(ದಲಿತ)ಜನಾಂಗದ ವ್ಯಕ್ತಿಗಳು ಯಾವುದೇ ತೊಂದರೆಗೆ ಸಿಲುಕಿದಾಗ ದೇವರಿಗೆ ಹರಕೆಯನ್ನು ಕಟ್ಟುವುದು ಸಹಜ. ಮಕ್ಕಳು ಆಗದೇ ಇರುವಾಗ ಅಥವಾ ಮಕ್ಕಳಿಗೆ ಆರೋಗ್ಯ ಸರಿಯಿಲ್ಲದಾಗ ಯಾವುದೇ ಅಪತ್ತು ಒದಗಿದಾಗ ಅಂಥ ಸಂದರ್ಭದಲ್ಲಿ ದೇವರಿಗೆ ಹರಕೆ ಕಟ್ಟಿಕೊಂಡು ದೇವರ ಹೆಸರಿನಲ್ಲಿ ಮುತ್ತು ಕಟ್ಟಿಸಿ ಸ್ತ್ರೀಯರನ್ನು ಬಿಡುತ್ತಾರೆ. ಅದಕ್ಕೆ ದೇವದಾಸಿ ಪದ್ಧತಿ ಎಂದು ಕರೆಯುತ್ತಾರೆ. ಈ ಸಂಪ್ರದಾಯಗಳು ಕೆಳ(ದಲಿತ)ಜನಾಂಗದಲ್ಲಿ ಸಾಮಾನ್ಯವಾಗಿ ಕಂಡುಬರುತ್ತದೆ. ಈ ಧಾರ್ಮಿಕ ಪದ್ಧತಿಯು ಈಗ ನೂರಕ್ಕೆ ನೂರರಷ್ಟು ನಾಶವಾಗಿದ್ದು, ಈ ಪದ್ಧತಿಗೆ ಒಳಗಾಗಿದ ಕೆಲವು ಹಿರಿಯ ದೇವದಾಸಿ(ಮಹಿಳೆ)ಯರು ಮಾತ್ರ ಅನುಸರಿಸುತ್ತಿದ್ದಾರೆ ಮತ್ತು ಇತ್ತೀಚ್ಚಿನ ಜನರು ಈ ಪದ್ಧತಿಯನ್ನು ಅನುಸರಿಸುತ್ತಿಲ್ಲ. ಎಂಬುದು ಈ ಗ್ರಾಮದ ದೇವದಾಸಿ ಮಹಿಳೆಯರಿಂದ ತಿಳಿದುಬರುತ್ತದೆ.

**ವಿವಾಹ**

ವಿಶ್ವದ ಎಲ್ಲ ಮಾನವ ಜನಾಂಗಗಳಲ್ಲಿಯೂ ರೂಢಿಯಲ್ಲಿರುವ ವೈವಾಹಿಕ ವೈವಾಹಿಕ ವ್ಯವಸ್ಥೆ ಆಚರಣೆಗೆ ಬರುವ ಮುನ್ನ ಮಾನವನು ಲೈಂಗಿಕ ಸಂಬಂಧವಾಗಿ ಪ್ರಾಣಿಗಳಂತೆ

ವರ್ತಿಸುತ್ತಿದ್ದ ಎಂಬುವುದರಲ್ಲಿ ಎರಡು ಮಾತಿಲ್ಲ. ವ್ಯಕ್ತಿ-ವ್ಯಕ್ತಿಗಳ ನಡುವೆ ಮಧುರ ಬಾಂಧವ್ಯ ಕುದುರಬೇಕಾದರೆ, ಪೈಶಾಚಿಕ ನಾಶವಾಗಿ ಸಮಾಜದಲ್ಲಿ ಸೌಹಾರ್ದತೆ, ಶಾಂತಿ, ಸ್ನೇಹಮಯ ವಾತಾವರಣ ಉಂಟಾಗಬೇಕಾದರೆ ಈ ಪದ್ಧತಿ ಅತ್ಯುತ್ತಮ ಹಾಗೂ ಅನಿವಾರ್ಯವಾಗಿತ್ತು.

**ಗಂಗೆ ಪೂಜೆ**

ಹೆಣ್ಣು ಹೆರಿಗೆಯಾದ ನಂತರ ಬಾಣಂತಿ ಕೆಲವು ದಿನಗಳ ಅವಧಿ ವಿಶ್ರಾಂತಿಯನ್ನು ತೆಗೆದುಕೊಳ್ಳುವುದು ಅವಳಿಗೂ ಹಾಗೂ ಜನಿಸಿದ ಮಗುವಿಗೂ ಆರೋಗ್ಯದ ಹಿತದೃಷ್ಟಿಯಿಂದ ಸರಿ ಎನ್ನಿಸುತ್ತದೆ. ಆ ಸಂದರ್ಭದಲ್ಲಿ ಅವಳು ಮನೆಯ ಯಾವುದೇ ಕೆಲಸವನ್ನು ಮಾಡುವಂತಿಲ್ಲ. ಈ ಸಮಯದಲ್ಲಿ ಮಕ್ಕಳಿಗೆ ಹೆಚ್ಚು ಪೋಷಣೆ ಮಾಡಲು ಅನುಕೂಲವಾಗುತ್ತದೆ. ಅವಳು ವಿಶ್ರಾಂತಿ ತೆಗೆದುಕೊಳ್ಳಲು ದಿವಸಗಳ ಸಂಖ್ಯೆ ಆಯಾ ಕುಟುಂಬಗಳ ಸಾಮಾಜಿಕತೆ ಮತ್ತು ಆರ್ಥಿಕತೆಯನ್ನು ಅವಲಂಬಿಸುತ್ತದೆ. ಇವರು ಪ್ರಾರಂಭದಿಂದ ಮೂರು ತಿಂಗಳವರೆಗೂ ವಿಶ್ರಾಂತಿಯನ್ನು ಪಡೆಯಬಹುದು. ಆ ಸಂದರ್ಭದಲ್ಲಿ ಅವಳು ತಣ್ಣೀರು ಮುಟ್ಟಬೇಕಾದರೆ ಮೊದಲು ಬಾವಿಗೋ, ಕೆರೆಗೋ, ಹಳ್ಳಗೋ, ನಲ್ಲಿಯ ನೀರಿಗೋ ಗಂಗೆ ಪೂಜೆ ಮಾಡಿ ಆದ ಮೇಲೆ ತಣ್ಣೀರನ್ನು ಬಳಸುತ್ತಾರೆ. ಈ ಒಂದು ಪರಂಪರೆ ಹಿಂದಿನಿಂದ ಇಲ್ಲಿಯವರೆಗೂ ಈ ಗ್ರಾಮದಲ್ಲಿ ಬೆಳೆದು ಬಂದಿದೆ.

**ಜವಳ ತೆಗೆಸುವುದು**

ಸಾಮಾನ್ಯವಾಗಿ ಈ ಪದ್ಧತಿಯು ಎಲ್ಲ ಸಮುದಾಯದ ಜನರ ಆಚರಣೆಯಲ್ಲಿದೆ. ಹುಟ್ಟು ಕೂದಲನ್ನು ಮೊದಲ ಸಲ ತೆಗೆಸುವಂತಹದ್ದನ್ನು ಜವಳ ತೆಗೆಸುವುದು ಎನ್ನುತ್ತಾರೆ. ಈ ಕೂದಲನ್ನು ತೆಗೆಸುವಾಗ ಕೆಲವು ವಿಧಿ-ವಿಧಾನಗಳನ್ನು ಆಚರಿಸುತ್ತಾರೆ. ಇದನ್ನು ಮಾಡುವಲ್ಲಿ ಕೆಲವು ಸಂಪ್ರದಾಯ ನಿಯಮಗಳು ಇವೆ. ಇದನ್ನು ಒಂದು ವರ್ಷ ಮುಗಿಯುವುದರೊಳಗೆ ತೆಗೆಸುತ್ತಾರೆ. ಅಯಾ ಕುಟುಂಬದ ಆರ್ಥಿಕ ಸ್ಥಿತಿಯ ಅನುಗುಣವಾಗಿ ಹಾಗೂ ಕೆಲವು ಇತರ ಕಾರಣಗಳಿಂದ ಅವಧಿಯಲ್ಲಿ ಕೂದಲು ತೆಗೆಸುವಾಗ ವ್ಯತ್ಯಾಸವಾಗುತ್ತದೆ.[೪]

ಅಂಬಳಿ ಗ್ರಾಮದ ಜನರು ಗಂಡು ಮಕ್ಕಳ ಹುಟ್ಟು ಕೂದಲನ್ನು ತೆಗೆಸುವುದು ಸಾಮಾನ್ಯವಾಗಿ ಅಯಾ ಕುಟುಂಬಗಳ ಸಂಪ್ರದಾಯದ ಮೂಲಮನೆಯ ದೇವರ ಸನ್ನಿಧಿ(ಗುಡಿ)ಯಲ್ಲಿ. ಇನ್ನು ಕೆಲವರು ದೇವಸ್ಥಾನಕ್ಕೆ ಹೋಗಿ ಪೂಜೆ ಮಾಡಿಸಿ ತೀರ್ಥ ತಂದು, ಹಾಕಿ ಗಂಡು ಮಕ್ಕಳ ಹುಟ್ಟು ಕೂದಲನ್ನು ತೆಗೆಯಿಸುತ್ತಾರೆ. ಅದಕ್ಕೆ ಆಯಾ ಕುಟುಂಬ ಬಂಧು ಬಳಗದವರನ್ನು ಕರೆಯಿಸಿ. ಮೊದಲು ಸೋದರ ಮಾವನಿಂದ ಕೂದಲನ್ನು ಕತ್ತರಿಸುತ್ತಾರೆ. ಆ ನಂತರ ಕೂದಲನ್ನು ತೆಗೆದ ಕಸುಬುದಾರ ಆ ವ್ಯಕ್ತಿಗೆ ಶಾಸ್ತ್ರದ ಪ್ರಕಾರ ಹೊಸ ಬಟ್ಟೆಯ ಜೊತೆಗೆ ತೆಂಗಿನಕಾಯಿ, ಬಾಳೇಹಣ್ಣು, ಎಲೆ, ಅಡಿಕೆ, ದಕ್ಷಿಣೆ(ಹಣ) ಇವುಗಳನ್ನು ಇಡುತ್ತಾರೆ. ಕೂದಲನ್ನು ತೆಗೆದ ಮೇಲೆ ಕುಟುಂಬ ಪರಿವಾರದವರು ಆ ಮಗುವಿಗೆ ದಕ್ಷಿಣೆಯ ರೂಪದಲ್ಲಿ ಹಣವನ್ನು ನೀಡುವ ಪದ್ಧತಿ ರೂಢಿಯಲ್ಲಿದೆ. ಹಾಗೂ ಹೆಣ್ಣುದೇವರ ಮೂರ್ತಿಗೆ ಅಥವಾ ದೇವಾಲಯದಲ್ಲಿ ಪ್ರಾಣಿ ಬಲಿ ಕೊಡುತ್ತಾರೆ.

### ಸೀಮಂತ ಕಾರ್ಯ

ವಿವಾಹವಾದ ಸ್ತ್ರೀಯು ಮೊದಲ ಸಲ ಗರ್ಭಿಣಿಯಾದರೆ ಆವಳಿಗೆ ಏಳು ತಿಂಗಳಲ್ಲಿ ಅಥವಾ ಒಂಬತ್ತನೇ ತಿಂಗಳಿನ ಮೊದಲನೆ ವಾರದಲ್ಲಿ ಸೀಮಂತ ಕಾರ್ಯ ಮಾಡುತ್ತಾರೆ. ಪದ್ಧತಿಯು ಎಲ್ಲ ಜನಾಂಗದಲ್ಲಿ ನಡೆಯುತ್ತದೆ. ಈ ಆಚರಣೆ ಮಹಿಳೆಯ ಗಂಡನ ಮನೆಯಲ್ಲಿ ನಡೆಯುತ್ತದೆ. ಇದಕ್ಕೆ ನೆಂಟರು ಬಂಧು ಬಳಗದವರನ್ನು ಆಹ್ವಾನಿಸುತ್ತಾರೆ. 'ಸ್ತ್ರೀ'ಗೆ ಹಸಿರು ಬಳೆ, ಹಸಿರು ಸೀರೆ, ರವಿಕೆ ತೊಡಿಸಿ, ಸತಿ–ಪತಿಗಳನ್ನು ಒಂದು ಕಡೆಯಲ್ಲಿ ಕುಳ್ಳಿರಿಸಿ ಆರತಿಯನ್ನು ಬೆಳಗುತ್ತಾರೆ. ಈ ರೀತಿಯ ವಿಶೇಷ ಆಚರಣೆಯನ್ನು ಈ ಪರಿಸರದಲ್ಲಿ ಕಾಣಬಹುದು.

### ೫.೨ ಜಾತ್ರೆಗಳು

ಯಾನೇನತ್ರಾಯತೇ ಇತಿಯಾತ್ರಾ ಅಂದರೆ ಪುಣ್ಯಕ್ಷೇತ್ರದ ದರ್ಶನಕ್ಕೆ ಹೋಗುವವರ ರಕ್ಷೆಯೇ ಯಾತ್ರೆಯಾಗಿದೆ. ಈ ಯಾತ್ರೆ ಶಬ್ದದ ತದ್ಭವ ರೂಪ ಜಾತ್ರೆ, ಜನ ಪ್ರಾಚೀನ ಕಾಲದಿಂದಲೂ ನಂಬಿಕೊಂಡು ಬಂದಿದ್ದ ದೇವಾನು–ದೇವತೆಗಳನ್ನು ಭಯ ಭಕ್ತಿಯಿಂದ ಸಾಮೂಹಿಕವಾಗಿ ಪೂಜಿಸಿ ಪ್ರಾರ್ಥಿಸುವ ಸಂಬ್ರಮದ ಜನ ಸಾಮೂಹವೇ 'ಜಾತ್ರೆ' ಎನ್ನಿಸಿಕೊಂಡಿವೆ. ಸಮಾಜದೊಂದಿಗೆ ಒಂದಾಗಿ ಬದುಕನ್ನು ಸಾಗಿಸುತ್ತ ಬಂದಿರುವ ಮಾನವನ ವೈಯಕ್ತಿಕ ಮತ್ತು ಸಾಂಘಿಕ ಜೀವನದ ಹಿತರಕ್ಷಣೆಗಾಗಿಯೂ ಮೂಕ ಪ್ರಾಣಿಗಳ ಸುಖಕ್ಕಾಗಿಯೂ ರೋಗ–ರುಜಿನಗಳು ಬಾರದಂತೆ, ಮಳೆ–ಬೆಳೆ ಸರಿಯಾಗಿ ಬರುವಂತೆ ಪ್ರಾರ್ಥಿಸುವ ಉದ್ದೇಶ ಈ ಜಾತ್ರೆಯದಾಗಿದ್ದು ಅದಕ್ಕೆ ಮುಂಚಿತವಾಗಿಯೇ ಹರಕೆಹೊತ್ತುದನ್ನು ಕಾರ್ಯರೂಪದಲ್ಲಿ ತರುವ ಆಚರಣೆಯೇ ಜಾತೆಯಾಗಿದೆ.

ಜಾತ್ರೆಗಳು ಎಲ್ಲ ದೇಶದ ಜನಾಂಗದವರಲ್ಲೂ ನಡೆದುಕೊಂಡು ಬಂದಿದೆ. ಮಧ್ಯ ಕರ್ನಾಟಕದ ಜಾತ್ರೆಗಳು ತಮ್ಮದೇ ಆದ ಪ್ರಾದೇಶಿಕ ವೈಶಿಷ್ಟ್ಯದಿಂದ ಕೂಡಿವೆ ಈ ಪ್ರದೇಶದ ಜನರ ಆಚಾರ–ವಿಚಾರ ಉದ್ಯೋಗ, ವ್ಯವಸಾಯ, ವ್ಯಾಪಾರ, ಮೊದಲಾದ ಜೀವನಕ್ರಮ ಹೆಚ್ಚು ಕಡಿವೆ ಒಂದೇ ಬಗೆಯಾಗಿರುತ್ತದೆ ಉಳಿದೆಡೆಗಳಂತೆಯೇ ಈ ಆಂಬಳಿ ಗ್ರಾಮ ದೇವತೆ ಪೂಜೆ ಪುನಸ್ಕಾರಗಳು ಜಾತ್ರೆಗಳಲ್ಲಿ ನಡೆಯುತ್ತದೆ.

ತಾವು ನಂಬಿಕೊಂಡು ಬಂದಿರುವ ದೇವಾನು–ದೇವತೆಗಳ ಹೆಸರಿನಲ್ಲ ದೇವಾಲಯವನ್ನು ಕಟ್ಟಿಸಿವರುಷಕ್ಕೊಮ್ಮೆ ಇಲ್ಲವೆ ತಮಗೆ ಸೂಕ್ತವೆನಿಸಿದ್ದಾಗ ಜಾತ್ರೆ, ಹಬ್ಬ, ಉತ್ಸವಗಳನ್ನು ನೆರವೇರಿಸುವರು. ಗ್ರಾನಗಳಲ್ಲಿ ನಗರಗಳಲ್ಲಿ ಇಂಥ ಗುಡಿ–ದೇವಾಲಯಗಳನ್ನು ಇಂದಿಗೂ ನಿರ್ಮಿಸಿರುವುದನ್ನು ಕಾಣಬಹುದು. ಮಳೆಗಾಲ ಮತ್ತು ಸುಗ್ಗಿಕಾಲಸಲ್ಲಿ ಹೊರತುಪಡಿಸಿ ಉಳಿದ ಅವಧಿಯಲ್ಲಿ ಜಾತ್ರೆಗಳನ್ನು ನೆರವೇರಿಸುವ ಒಂದು ಸಂಪ್ರದಾಯವಿದೆ. ದೇವಾನು–ದೇವತೆಗಳನ್ನು ಪಲ್ಲಕ್ಕಿಯಲ್ಲಿ ಅಥವಾ ರಥದಲ್ಲಿ ಕೂರಿಸಿ ಜಾತ್ರೆ ಮಾಡುವ ಪರಿಪಾಠ ಬೆಳೆಸುಬಂದಿದೆ. ಮುಖ್ಯದೇವರುಗಳ ಜಾತ್ರೆಗಳನ್ನು ಮಾಡಲು ಹಣ ಹೆಚ್ಚು ಸಂದಾಯವಾಗುತ್ತ ಬಂದಿರುವುದರಿಂದ ಇವು ತೇರಿನ (ರಥೋತ್ಸವ) ಜಾತ್ರೆಗಳಾಗಿ ನೆರವೇರುತ್ತಾ ಬಂದಿರುತ್ತವೆ.

### ಕಲ್ಲೇಶ್ವರ ದೇವರ ರಥೋತ್ಸವ

ಯುಗಾದಿಯ ಪಾಡ್ಯದಂದು ಗ್ರಾಮಸ್ಥರು ಮತ್ತು ಮಠಾಧೀಶರ ಸಮ್ಮುಖದಲ್ಲಿ ಕಲ್ಲೇಶ್ವರ ಸ್ವಾಮಿಯ ತೇರಿಗೆ ಪೂಜಾರಿಸಿಂದ ಪೂಜೆ ಮಾಡಿ. ತೇರಿನ ಗಾಲಿಗೆ ಬಣಕಾರ ಮನೆಯಿಂದ ಅನ್ನತಂದು ಬಲಿಬಾನ ಹಾಕುವುದು. ಹರಿಜನರು ತೇರಿನ ಸುತ್ತ ಮೂರು ಸಲ ತಿರುಗಿ ಎಣ್ಣೇಯ ದೀಪಾ ಹಚ್ಚಿದ ನಂತರ ತೇರನ್ನು ತೇರಿನ ಮನೆಯಿಂದ ಸ್ವಲ್ಪ ದೂರ ಮುಂದೆ ಸಾಗಿಸಿ. ೩-೪ ದಿನಗಳ ನಂತರ ತೇರಿನ ಮೇಲೆ ಅಂಕಣ ಕಟ್ಟಲು ಪ್ರಾರಂಭಿಸುತ್ತಾರೆ. ಈ ತೇರಿನಲ್ಲಿ ದೇವರುಗಳ ಮೂರ್ತಿಗಳಿವೆ, ಪಶ್ಚಿಮಕ್ಕೆ ವಿಘ್ನೇಶ್ವರ, ಪೂರ್ವಕ್ಕ ಚೌಡೇಶ್ವರಿಯು, ಉತ್ತರಕ್ಕೆ ಕಾಮಧೇನ, ದಕ್ಷಿಣಕ್ಕೆ ಕೃಷ್ಣ ದೇವರುಗಳ ಜೊತೆಗೆ ಇತರೆ ದೇವರುಗಳ ಮೂರ್ತಿಗಳನ್ನು ತೇರಿನಲ್ಲಿ ಕೆತ್ತಲಾಗಿದ್ದು. ಇವುಗಳಿಗೆ ಕಲ್ಲೇಶ್ವರ ದೇವಾಲಯದ ಮಠಾಧೀಶರ ಮತ್ತು ಪೂಜಾರಿಯಿಂದ ಪೂಜೆ ನಡೆಯುತ್ತದೆ. ಈ ದಿನ ಅಮೃತಗಳಿಗೆಯಲ್ಲಿ ತೇರಿನ ಮೇಲೆ ಆಯಾಗಾರರು ಸಿಡಿಯ ಒಂದು ಅಂಕಣ(ಕುಚ್)ವನ್ನು ಇಡುತ್ತಾರೆ. ಇದೇ ರೀತಿ 'ದವನದ ಹುಣ್ಣಿಮೆ' ಬರುವುದರ ಒಳಗಾಗಿ ಆಯಾಗಾರರು ರಥೋತ್ಸವನ್ನು ಸಂಪೂರ್ಣ ಅಲಂಕೃತವಾಗಿ ತಯಾರಿಸುತ್ತಾರೆ.

### ದವಣದ ಹುಣ್ಣಿಮೆಯ ಮುಂಚಿತ ಕಾರ್ಯಕ್ರಮಗಳು

ಮೊದಲನೇ ದಿನ, ಹುಚ್ಚಯ್ಯನ ಸಣ್ಣ ತೇರನ್ನು ಹೂವು, ಬಾಳೇಹಣ್ಣು, ಬಣ್ಣ-ಬಣ್ಣದ ಬಟ್ಟೆಯಿಂದ ಅಲಂಕಾರ ಮಾಡುವುದಲ್ಲದೆ. ತೇರಿನ ಮೇಲೆ ಕಳಾಸವನ್ನು ಇಟ್ಟು ತೇರನ್ನು ಎಳೇಯುವ ಮುನ್ನ ಕಲ್ಲೇಶ್ವರ ದೇವಾಲಯದ ಗರ್ಭಗೃಹದಲ್ಲಿ ಶಿವಲಿಂಗ ಹಾಗೂ ನಂದಿ ಶಿಲ್ಪಕ್ಕೆ ಅಭಿಷೇಕ ಮಾಡಿ. ಪೂಜಾರಿ ಮತ್ತು ಬಣಕಾರ ಮನೆಯವರು ಮೂರ್ತಿಗಳಿಗೆ ಪೂಜೆ ಮಾಡಿದ ನಂತರ ಪಲ್ಲಕ್ಕಿಯಲ್ಲಿ ಉತ್ಸವ ಮೂರ್ತಿಯನ್ನು ಇಟ್ಟು ಊರು ತುಂಬ ಮೆರವಣಿಗೆ ಮಾಡಿ ಸಂಜೆ ಸಣ್ಣ ರಥೋತ್ಸವದಲ್ಲಿ ಉತ್ಸವ ಮೂರ್ತಿಯನ್ನು ಇಡುವುದಲ್ಲದೆ ಭಕ್ತರ ಸಮ್ಮುಕದಲ್ಲಿ ತೇರನ್ನು ಕಲ್ಲೇಶ್ವರ ದೇವರ ಪಾದಕಟ್ಟೆಯವರೆಗೆ ಎಳೆಯುವರು. ಹಾಗೂ ಉತ್ಸವ ಮೂರ್ತಿಯನ್ನು ಕಲ್ಲೇಶ್ವರ ದೇವಾಲಯದ ಸುತ್ತ ಮೂರು ಸಲ ಪ್ರದಕ್ಷಿಣೆ ಮಾಡಿ ದೇವಾಲಯದಲ್ಲಿ ಹೋಗುತ್ತದೆ. ರಾತ್ರಿ ಭಜನೆ ಹಾಗೂ ದೇವರ ಮಂಗಳ ಕಾರ್ಯವನ್ನು ಮಾಡುವರು.

ಎರಡನೇ ದಿನ, ಹುಚ್ಚಯ್ಯ ಮಗ ಬಸವಣ್ಣನ ಸಣ್ಣ ತೇರನ್ನು ಹೂವು, ಬಾಳೇಹಣ್ಣು, ಬಣ್ಣ-ಬಣ್ಣದ ಬಟ್ಟೆಯಿಂದ ಅಲಂಕಾರ ಮಾಡುವುದಲ್ಲದೆ. ತೇರಿನ ಮೇಲೆ ಕಳಸವನ್ನು ಇಟ್ಟು ತೇರನ್ನು ಎಳೇಯುವ ಮುನ್ನ ಕಲ್ಲೇಶ್ವರ ದೇವಾಲಯದಲ್ಲಿ ಬಣಕಾರ ಮನೆಯವರು ಶಿವಲಿಂಗ ಹಾಗೂ ನಂದಿ ಶಿಲ್ಪಕ್ಕೆ ಪೂಜೆ ಮಾಡಿದ ನಂತರ ಪಲ್ಲಕ್ಕಿಯಲ್ಲಿ ಉತ್ಸವ ಮೂರ್ತಿಯನ್ನು ಇಟ್ಟು ಊರು ತುಂಬ ಮೆರವಣಿಗೆ ಮಾಡಿ. ಮುಂಜಾನೆ ೧೦ ರಿಂದ ೧೧ ಒಳಗೆ ಈ ಸಣ್ಣ ರಥೋತ್ಸವವನ್ನು ಊರಿನ ಎಲ್ಲಾ ಭಕ್ತರು ಸೇರಿ ತೇರನ್ನು ಎಳೆಯುವರು. ತೇರಿನ ಕಾರ್ಯವು ಮುಗಿದ ನಂತರ ಉತ್ಸವ ಮೂರ್ತಿಯನ್ನು ಕಲ್ಲೇಶ್ವರ ದೇವಾಲಯದ ಸುತ್ತ ಪ್ರದಕ್ಷಿಣೆ ಮಾಡಿ ದೇವಾಲಯದ ಒಳಗಡೆ ಪ್ರವೇಶ ಮಾಡುತ್ತದೆ. ಹಾಗೂ ಶ್ರೀಸ್ವಾಮಿಯ ತೇರಿಗೆ ಜಲ್ಲಿಯನ್ನು ಇಡುವುದಲ್ಲದೆ. ಗೌಡರ ಮನೆಯಿಂದ ತಂದ ಕಳಸಾವನ್ನು ಪೂಜೆ ಮಾಡಿ ತೇರಿನ ಮೇಲೆ ಇಡಲಾಗುತ್ತದೆ.

## ಕಲ್ಲೇಶ್ವರ ಮತ್ತು ಪಾರ್ವತಿಯ ಮದುವೆ

ಕಲ್ಲೇಶ್ವರ ಮತ್ತು ಪಾರ್ವತಿಯ ಮದುವೆಯ ಕಾರ್ಯವನ್ನು ಮಾಡಲು ಗೌಡರ ಮನೆಯಿಂದ ಕಳಸಾ, ಬಣಕಾರ ಮನೆಯಿಂದ ಹೆಸರು ಹಾಲಗಂಬ ತರುವುದು, ಕುಂಬಾರ ಮನೆಯಿಂದ ಹರಣಿ ಬಾಸಿಂಗ (ಕುಂಭ) ತರುವುದು, ಅಕ್ಕಸಾಲಿ ಮನೆಯಿಂದ ತಾಳಿ, ಕಡಗ ತರುವುದಲ್ಲದೆ. ಶ್ರೀ ಸ್ವಾಮಿಗೆ ಪಂಚಾಮೃತ ಅಭಿಷೇಕ, ಪೂಜೆ ಮಾಡಿ ಊರಿನ ಹಳ್ಳದಿಂದ ಗಂಗೆ(ನೀರನ್ನು)ಯನ್ನು ಕುಂಭದಲ್ಲಿ ತುಂಬಿಕೊಂಡು ತರುವುದು, ನಂತರ ಜಂಗಮರ ಮುಖಾಂತರ ಸುರಿಗೆ ಸುತ್ತಿ ಕಂಕಣಬದ್ಧರಾಗಿ ಕಲ್ಲೇಶ್ವರ ಮತ್ತು ಪಾರ್ವತಿಯ ಮದುವೆಯ ಕಾರ್ಯಕ್ರಮವನ್ನು ಮಾಡುವುದು. ಈ ಮದುವೆ ಕಾರ್ಯವನ್ನು ನೋಡಿದರೆ ಊರಿನ ಜನರು ಎಲ್ಲಾ ಜನಾಂಗವನ್ನು ಒಟ್ಟಿಗೆ ಸೇರಿಸಿ ಸಹೋದರ ಸ್ನೇಹವನ್ನು ಬೆಳೆಸುವ ಕಾರ್ಯವಾಗಿದೆ. ಹಾಗಾಗಿ ಎಲ್ಲ ಸಮುದಾಯದವರು ಅನ್ಯೋನ್ಯವಾಗಿ ಬಾಳುತ್ತಿದ್ದಾರೆ. ಇದರಿಂದ ಸಮಾಜಕ್ಕೆ ಉತ್ತಮ ಸಂದೇಶವನ್ನು ಕೊಡುವರು.

ಮೂರನೇ ದಿನ, ಯುಗಾದಿ ಪಾಡ್ಯದಿಂದ ದವನದ ಹುಣ್ಣಿಮೆವರೆಗೆ ತೇರನ್ನು ಸಿಡಿಗಳಿಂದ ಕಟ್ಟಿ ಅಲಂಕರಿಸಿ ಹೂವು, ಬಾಳೇಗಿಡ, ಬಣ್ಣ-ಬಣ್ಣದ ವಸ್ತ್ರ, ದೇವರ ಧ್ವಜಗಳಿಂದ ಹೀಗೆ ವಿವಿಧ ವಸ್ತುಗಳನ್ನು ಬಳಸಿ ತೇರನ್ನು ತಯಾರಿಸಿ ಮೂರನೆಯ ದಿನ ಅಂದರೆ ದವನದ ಹುಣ್ಣಿಮೆಯು ೨-೩ದಿನ ಮುಂಚಿತವಾಗಿ ರಥೋತ್ಸವವನ್ನು ಊರಿನ ಮತ್ತು ಸುತ್ತಮುತ್ತಲಿನ ಭಕ್ತಾಧಿಗಳು ಹಾಗೂ ಸಂಬಂಧಿಕರು ಸೇರಿ ಕಲ್ಲೇಶ್ವರ ರಥೋತ್ಸವವನ್ನು ವಿಜೃಂಭಣೆಯಿಂದ ನಂದಿಕೋಲು, ಕುಣಿಸುತ್ತ ವಾದ್ಯಗಳೊಂದಿಗೆ ಕಲಿದೇವರ ನಾಮವನ್ನು ಕೂಗುತ್ತ ಚಿಕ್ಕ ಮಕ್ಕಳಿಂದ ಹಿಡಿದು ಹಿರಿಯರವರೆಗೆ ಹೆಣ್ಣು, ಗಂಡು ಎಂಬ ಭೇದವಿಲ್ಲದೆ ನಾಮಸ್ಮರಣೆ ಮಾಡುತ್ತ. ಭಕ್ತಾಧಿಗಳು ತೇರನ್ನು ಕಲ್ಲೇಶ್ವರ ದೇವರ ಪಾದಕಟ್ಟೆಯವರೆಗೆ ಎಳೆಯುವರು. ಅಲ್ಲಿ ಪೂಜೆ ಮಾಡಿದ ನಂತರ ಮತ್ತೇ ಹಿಂತಿರುಗಿ ಎಳೆದು ತಂದು ದೇವಾಲಯದ ಮುಖ್ಯ ಬೀದಿಯಲ್ಲಿ ನಿಲ್ಲಿಸಲಾಗುತ್ತದೆ.

ನಾಲ್ಕನೇ ದಿನ, ಕಲ್ಲೇಶ್ವರ ಸ್ವಾಮಿಯ ಓಕಳೀ ಜರುಗುವುದು, ರಥೋತ್ಸವ ದಿನದಂದು ಹಿರಿಯರು, ಕಿರಿಯರು, ಸ್ತ್ರೀಯರೆನ್ನದೇ ಎಲ್ಲರು ಒಟ್ಟಿಗೆ ಸೇರಿ ಸಂಭ್ರಮಿಸಿದರೆ. ಈ ಓಕಳೀಯಂದು ಯುವಕರು, ಮಧ್ಯಮ ವಯಸ್ಕರು ಮತ್ತು ತಮ್ಮ ಕಷ್ಟಗಳನ್ನು ಪರಿಹರಿಸಿದ ಭಕ್ತಾಧಿಗಳು ಮಾತ್ರ ಅತೀ ವಿಜೃಂಭಣೆಯಿಂದ ಸಂಭ್ರಮಿಸುವ ದಿನವಾಗಿದೆ. ಕಲ್ಲೇಶ್ವರ ದೇವಾಲಯದ ಮುಂದಿನ ಎಡಭಾಗದಲ್ಲಿರುವ ಓಕಳೀ ಹೊಂಡದಲ್ಲಿ ಜಂಗಮರು ಮತ್ತು ಗ್ರಾಮಸ್ಥರು ಸೇರಿ. ಐದು ಜನ ಮುತ್ತೈದೇ ಮಹಿಳೆಯರಿಂದ ಐದು ಬಿಂದಿಗೆ(ಕೊಡದಲ್ಲಿ)ಯಲ್ಲಿ ಗಂಗೇಯನ್ನು ಬಾವಿಯಿಂದ ತಂದು ಪೂಜೆ ಮಾಡಿ ಓಕಳೀ ಹೊಂಡದಲ್ಲಿ ಹಾಕುವುದು. ಇದೇ ರೀತಿ ಸಂಜೆ ನಾಲ್ಕು ಘಂಟೆಯ ಸಮಯಕ್ಕೆ ಸರಿಯಾಗಿ ಹೊಂಡವನ್ನು ಗಂಗೆ(ನೀರಿನಿಂದ)ಯಿಂದ ಭರ್ತಿಮಾಡುವುದು. ಓಕಳಿಯ ಸುತ್ತ ಇರುವ ಎರಡು ಕಂಬಗಳ ನಾಲ್ಕು ಮೂಲೆಗೆ ಬಲಿಬಾನ(ಅನ್ನ) ಹಾಕಿ ಎರಡು ಕಂಬದ ಮಧ್ಯದಲ್ಲಿ ತೆಂಗಿನಕಾಯಿ ಕಟ್ಟಿದ. ನಂತರ ಜಂಗಮರು (ಮಠಾಧೀಶರು) ಬಂಧು ದೇವಸ್ಥಾನದಲ್ಲಿರುವ ಕಲ್ಲೇಶ್ವರ ದೇವರ ಉತ್ಸವ ಮೂರ್ತಿಯನ್ನು ಪಲ್ಲಕ್ಕಿಯಲ್ಲಿ ಇಟ್ಟು ವಾದ್ಯಗಳೊಂದಿಗೆ ವಿಜೃಂಭಣೆಯಿಂದ ಹೊರಗಡೆ ತಂದು.

ಓಕಳಿ ಹೊಂಡ(ಗುಂಡಿ)ಯ ಸುತ್ತ ಮೂರು ಸಲ ಪಲ್ಲಕ್ಕಿಯನ್ನು ಪ್ರದಕ್ಷಿಣೆ ಮಾಡಿಸಿ ಹಿಂದಕ್ಕೆ-ಮುಂದಕ್ಕೆ ಮಾಡಿ ನಂತರ ಇದೇ ದೇವಾಲಯದ ಬಲಭಾಗದಲ್ಲಿರುವ ಬನ್ನಿ ಮರಕ್ಕೆ ಬಂದು ಉತ್ತರಾಭಿಮುಖ(ಹೊಳೆ ಮುಖ)ವಾಗಿ ಇರುವ ಉತ್ಸವ ಮೂರ್ತಿಯನ್ನು ಭಕ್ತಾಧಿಗಳು ತಮ್ಮ ತಮ್ಮ ಇಷ್ಟದಂತೆ ಸ್ವಾಮಿಯನ್ನು ಬೇಡುತ್ತಾ ಓಕಳಿಯ ಕಂಬದ ಮಧ್ಯದಲ್ಲಿರುವ ತೆಂಗಿನಕಾಯಿಯನ್ನು ಭಕ್ತಾಧಿಗಳು ನಾಮುಂದು ತಾಮುಂದು ಎಂದು ಪೈಪೋಟಿಯಿಂದ ಕೀಳುವರು. ಹೊಂಡದಲ್ಲಿ ತುಂಬಿರುವ ನೀರನ್ನು ಬಕ್ತಾಧಿಗಳು ಒಬ್ಬರ ಮೇಲೆ ಮತ್ತೊಬ್ಬರು ನೀರನ್ನು ಎರಚಿ ಹೊಂಡವನ್ನು ಖಾಲಿ ಮಾಡುವರು. ನೀರನ್ನು ಎರಚುವುದು ಮತ್ತು ತೆಂಗಿನಕಾಯಿ ಕೀಳುವ ಉದ್ದೇಶ ತಮಗೆ ಬೇಡಿದ್ದನ್ನು ಕರುಣಿಸುತ್ತಾನೆ ಕಷ್ಟಗಳನ್ನು ದೂರಮಾಡುತ್ತಾನೆ ಎಂಬ ನಂಬಿಕೆ ಭಕ್ತಾಧಿಗಳಲ್ಲಿದೆ. ಹೀಗೆ ಈ ಓಕಳಿ ಕಾರ್ಯವು ಮುಗಿದ ನಂತರ ದೇವರ ಉತ್ಸವ ಮೂರ್ತಿಯನ್ನು ಪಲ್ಲಕ್ಕಿಯಲ್ಲಿ ಗಂಗೆಗೇ ಹಳ್ಳಕ್ಕೆ ಹೋಗಿ ಪೂಜೆ ಮಾಡಿ ದೇವಾಲಯದ ಸುತ್ತ ಮೂರು ಸಲ ಪ್ರದಕ್ಷಿಣೆ ಮಾಡಿದ ಮೇಲೆ ಗರ್ಭಗೃಹದ ಒಳಗಡೆ ಹೋಗುತ್ತದೆ.

ಐದನೇ ದಿನ, ಕಡುಬಿನ ಕಾಳಗ ಗ್ರಾಮಸ್ಥರು ಮತ್ತು ಮಠಾಧೀಶರ ಸಮ್ಮುಖದಲ್ಲಿ ಊರ ಬಣಕಾರ ಮನೆಯಿಂದ ಕಡಬುವನ್ನು ವಾದ್ಯಗಳೊಂದಿಗೆ ಕಲ್ಲೇಶ್ವರ ದೇವಾಲಯದ ಮುಂದೆ ತಂದು. ಎರಡು ಬದಿಯಲ್ಲಿ ಇಟ್ಟು ದೇವಾಲಯದ ಒಳಗಡೆ ಇರುವ ಕಲ್ಲೇಶ್ವರ ಉತ್ಸವ ಮೂರ್ತಿಯನ್ನು ವಿಜೃಂಭಣೆಯಿಂದ ಹೊರಗೆ ತಂದು. ಕಡಬುಗಳಿಗೆ ಪೂಜೆ ಹಾಗೂ ಮೂರು ಸಲ ಪ್ರದಕ್ಷಿಣೆ ಮಾಡಿ ಪಶ್ಚಿಮಾಭಿಮುಖವಾಗಿ ಉತ್ಸವ ಮೂರ್ತಿಯನ್ನಿಟ್ಟು, ಪರಮೇಶ್ವರನ ಕಡೆಯವರು ಗೌಡರು, ಪಾರ್ವತಿ ಕಡೆಯವರು ಬಣಕಾರರು ಎಂದು ವಿಭಾಗಿಸಿ, ಎಲ್ಲರಿಗೂ ತಮ್ಮ ಕೈಗೆ ಕಂಕಣವನ್ನು ಕಟ್ಟಿಕೊಂಡು. ಕಡುಬನ್ನು ಇಟ್ಟು, ಎರಡು ಮನೆಯವರು ಕಚ್ಚಾಡುತ್ತಾ, ಜಗಳವಾಡುತ್ತ ಕಡುಬನ್ನು ತಿನ್ನುವರು. ಈ ಕಡುಬಿನ ಕಾಳಗದಲ್ಲಿ ಪಾರ್ವತಿಯ ಮನೆಯವರು ಅಂದರೆ ಬಣಕಾರರು ಕಡಿಮೆ ಸಂಖ್ಯೆಯಲ್ಲಿ ಹಾಗೂ ಪರಮೇಶ್ವರನ ಮನೆಯವರು ಅಂದರೆ ಗೌಡರು ಹೆಚ್ಚಿನ ಸಂಖ್ಯೆಯಲ್ಲಿ ಇರುವುದರಿಂದ ಪಾರ್ವತಿಯು ಸೋಲುತ್ತಾಳೆ ಪರಮೇಶ್ವರನು ಗೆದ್ದು ಮನೆಯ ಬಾಗಿಲನ್ನು ತೆರೆದು ಒಳಗೆ ಹೋಗುತ್ತಾನೆ ಎಂದು ಈ ಭಕ್ತಾಧಿಗಳ ನಂಬಿಕೆಯಾಗಿದೆ.

ಈ ಕಡುಬಿನ ಕಾಳಗದ ಉದ್ದೇಶವು, ಪರಮೇಶ್ವರನು ಭಕ್ತರ ರಕ್ಷಣೆಗಾಗಿ ಪಾರ್ವತಿಯ ಸಲಹೆ ಇಲ್ಲದೇ ರಾಕ್ಷಸರನ್ನು ಸಂಹರಿಸಲು ಹೋಗಿದ್ದಾಗ. ಪಾರ್ವತಿಯು ತನ್ನ ಒಪ್ಪಿಗೆ ಇಲ್ಲದೆ ಪರಮೇಶ್ವರನು ಹೋಗಿದ್ದಾನೆಯೇ ಎಂದು ಮುನಿಸಿಕೊಂಡು ಮಗನಾದ ಗಣೇಶನಿಗೆ ನಿಮ್ಮ ತಂದೆ ಪರಮೇಶ್ವರನು ಬಂದರೆ ಬಾಗಿಲನ್ನು ತೆಗೆಯಬೇಡ ಎಂದು ಮುನಿಸಿ ಹೇಳಿ ಹೋದಳು. ಪರಮೇಶ್ವರ ಬಂದು ಮನೆಯ ಬಾಗಿಲನ್ನು ತಗೆಯುವಂತೆ ಗಣೇಶನಿಗೆ ಹೇಳಿದ್ದಾಗ, ಇದಕ್ಕೆ ಒಪ್ಪದ ಗಣೇಶ ತಾಯಿ(ಪಾರ್ವತಿ)ಯ ಮಾತನ್ನು ಪಾಲಿಸಿದನು. ಪರಮೇಶ್ವರನು ಎಷ್ಟೇ ಕೇಳಿಕೊಂಡರು ಬಾಗಿಲನ್ನು ತೆಗೆಯಲು ಒಪ್ಪದ ಗಣೇಶ. ಪಾರ್ವತಿಯನ್ನು ಬಾಗಿಲು ತೆಗೆಯುವಂತೆ ಹೇಳಿದನು. ಒಂದು ವೇಳೆ ಬಾಗಿಲು ತೆಗೆಯದೆ ಇದ್ದರೆ ಯುದ್ದ ನಡೆಯುತ್ತದೆ ಎಂದು ತಿಳಿಸಿದ ಪರಮೇಶ್ವರನು. ಆಗ ಪಾರ್ವತಿಯು ಯುದ್ಧ ನಡೆಯಲಿ ಎಂದು ಹೇಳಿದಾಗ, ರೋಷದಿಂದ ಗಣೇಶನ ಶಿರವನ್ನು ಪರಮೇಶ್ವರ ಸಂಹರಿಸಿದ ಇದನ್ನು ನೋಡಿದ ಪಾರ್ವತಿಯು

ತನ್ನ ಮಗನ ಶಿರವು ಬೇಕೆಂದು ಹಠ ಹಿಡಿದಾಗ. ಆನೆಯ ಶೀರವನ್ನು ಕಡಿದು ತಂದು ಗಣೇಶನ ದೇಹದ ಮೇಲೆ ಇಟ್ಟಾಗ ಗಣೇಶನ ಮುಖವು ಆನೆಯ ಮುಖವಾಯಿತು. ಎಂದು ಈ ಕಡುಬಿನ ಕಾಳಗದ ಆಚರಣೆಯ ಉದ್ದೇಶವಾಗಿದೆ. ಈ ಕಾರ್ಯವು ಮುಗಿದ ನಂತರ ಎರಡು ಮನೆಯವರು ಗಂಗೆಗೇ(ಹಳ್ಳಕ್ಕೆ) ಹೋಗಿ ಕಂಕಣವನ್ನು ಬಿಚ್ಚಿ ನೀರಲ್ಲಿ ಬಿಡುತ್ತಾರೆ. ಹಾಗೂ ಉಚ್ಚಾಯದ ಕಳಸವನ್ನು ತೇರಿನಿಂದ ಇಳಿಸಿ, ಗೌಡರ ಮನೆಯಲ್ಲಿ ಇಡುವುದು ವಾಡಿಕೆಯಾಗಿದೆ.

ಈ ವಿಶೇಷ ಆಚರಣೆಯು ಕಲ್ಲೇಶ್ವರ ದೇವರ ರಥೋತ್ಸವದ ಪ್ರಾರಂಭವು ಯುಗಾದಿ ಪಾಡ್ಯದಿಂದ ಒಂದಲ್ಲ ಒಂದು ರೀತಿಯಲ್ಲಿ ತಪ್ಪದೇ ದವನದ ಹುಣ್ಣಿಮೆಯವರೆಗೂ ಆಚರಣೆ ನಡೆಯುವ, ಈ ಅಂಬಳಿ ಗ್ರಾಮದಲ್ಲಿ ದವಣದ ಹುಣ್ಣಿಮೆಯ ಇನ್ನು ಮೂರು ದಿನ ಮುಂಚಿತವಾಗಿಯೆ ವಿಶೇಷ ಆಚರಣೆಯು ನಡೆಯುವುದು ಈ ಮೇಲಿನ ಆಚರಣೆಯ ಕಾರ್ಯದಿಂದ ತಿಳಿಯುತ್ತದೆ.

## ದುರ್ಗಾಂಭಿಕಾ ದೇವಿಯ ಜಾತ್ರೆ

ಮೂರು ಅಥವಾ ಒಂಭತ್ತು ವರ್ಷಗಳಗೊಮ್ಮ ನಡೆಯುವ ಈ ಜಾತ್ರೆ ಊರಿನ ದೈವಸ್ಥರ ನಿಶ್ಚಯದಂತೆ. ಮಾಘ ಮಾಸದಲ್ಲಿ ಊರಿನ ಎಲ್ಲಾ ಜನಾಂಗದವರು ಸೇರಿ ದೇವಿಯ ಆಚರಣೆಗಾಗಿ ಪ್ರತಿ ಮನೆಯಿಂದ ಚಂದಾ(ಹಣ)ವನ್ನು ಸಂಗ್ರಹಿಸುವುದರ ಜೊತೆಗೆ ಇತರೆ ದಾನಿಗಳ ಹಾಗೂ ಭಕ್ತಾಧಿಗಳಿಂದಲೂ ದಾನವನ್ನು ಪಡೆದು, ಈ ಜಾತ್ರೆಯನ್ನು ಭಕ್ತಿ ಶ್ರದ್ಧೆಯಿಂದ ಆಚರಣೆ ಮಾಡುತ್ತಾರೆ. ಎಲ್ಲಾ ದೇವಸ್ಥಾನಗಳಿಗೆ ಬಣ್ಣವನ್ನು ಹಚ್ಚಿ ದೀಪಗಳಿಂದ ಅಲಂಕರಿಸಿ. ಊರಿನ ಸುತ್ತ ಮುಳ್ಳಿನಿಂದ ದಿಗ್ಬಂಧನ ಹಾಕಿ, ಬಡಿಗೇರ ಮನೆಯಿಂದ ತೊಟ್ಟಿಲು ತೆಗೆದುಕೊಂಡು ದುರ್ಗಾಂಭಿಕಾ ದೇವಿಯ ಗುಡಿಗೆ ಬಂದು ಹಂದರದ ಅಟ್ಟಿಗೆ ಕಟ್ಟಿ, ನಂತರ ಡೊಣ್ಣೆಕೆಂಚಮ್ಮನ ಗುಡಿಯಲ್ಲಿಯು ತೊಟ್ಟಿಲನು ಕಟ್ಟಿ, ಕುಂಬಾರ ಮನೆಯಿಂದ ಖೇಲು(ಮಡಿಕೆ)ಗಳನ್ನು ಪೂಜೆ ಮಾಡಿ ವಾದ್ಯಗಳೊಂದಿಗೆ ದೇವಸ್ಥಾನಕ್ಕೆ ತಂದು, ನಾಲ್ಕು ಜನ ಬಡಿಗೇರ ಸಮುದಾಯದವರನ್ನು ಕರೆದು ದೇವಿಯ ಮೂರ್ತಿಯನ್ನು ಹೊತ್ತಿಕೊಂಡು ಮಧ್ಯರಾತ್ರಿ ೧ ಗಂಟೆಗೆ ಗಂಗಮ್ಮಗೆ(ಹಳ್ಳಕ್ಕೆ) ಹೋಗಿ ಪೂಜೆ ಪುನಸ್ಕಾರ, ಮಂತ್ರೋಪದೇಶ ಮಾಡಿ ಮುಂಜಾನೆ ಸುಮಾರು ೪ ಗಂಟೆಗೆ ದುರ್ಗಾಂಭಿಕಾ ದೇವಿಯ ಗುಡಿಗೆ ಬಂದು ಗುಡಿಯಲ್ಲಿ ಮೂರ್ತಿ ಇಟ್ಟು(ಗುಡಿತುಂಬಿಸಿ) ಪೂಜೆ ಮಾಡಿ. ಹೊಳೆ ಹತ್ತಿರ, ಕರಗಲ್ಲ, ಡೊಣ್ಣೆಕೆಂಚಮ್ಮ ಗುಡಿಗಳಿಗೆ ಬಲಿಯನ್ನು ಕೊಟ್ಟು, ದುರ್ಗಾಂಭಿಕಾ ದೇವಿಗೆ ಬಿಟ್ಟಿರುವ ಕೋಣವನ್ನು ತಂದು ಗುಡಿಯ ಸುತ್ತ ಮೂರು ಸಲ ಪ್ರದಕ್ಷಿಣೆ ಮಾಡಿ ಕೋಣವನ್ನು ಪಶ್ಚಿಮ ದಿಕ್ಕಿಗೆ, ದೇವಿಯ ಅಭಿಮುಖವಾಗಿ ಬಲಿ ಕೊಡುತ್ತಾರೆ.

ಕೋಣವನ್ನು ಬಲಿಕೊಟ್ಟ ರಕ್ತದ ಜೊತೆಗೆ ಇತರೆ ಧಾನ್ಯಗಳನ್ನು ಸೇರಿಸಿ, ಗ್ರಾಮದ ದಲಿತ ಜನಾಂಗದ ಒಬ್ಬ ವ್ಯಕ್ತಿಯಿಂದ ಚರಗವನ್ನು ಗ್ರಾಮದ ಸುತ್ತ ಗುರ್ತಿಸಿದ ಜಾಗದಲ್ಲಿ ಚೆಲ್ಲುವಾಗ, ಅವ್ಯಕ್ತಿಯು ಅರೆನಗ್ನವಾಗಿರುವುದು ವಿಶೇಷ ಈ ಹುಲುಸು(ರಕ್ತಚರಗ)ವನ್ನು ಚೆಲ್ಲುವುದರಿಂದ ಉತ್ತಮ ಮಳೆ-ಬೆಳೆ ಸಮೃದ್ಧಿಯಾಗುವುದೆಂಬ ನಂಬಿಕೆಯೇ ಈ ಆಚರಣೆ ಮುಂದುವರಿಕೆಗೆ ಕಾರಣವಾಗಿದೆ. ಹುಲುಸನ್ನು ಚೆಲ್ಲುವಾಗ ಗ್ರಾಮದಿಂದ ಹೋರಾಕ್ಕೆಯಾರು ಬರುವ ಹಾಗಿಲ್ಲ. ಹಾಗೂ ಒಳಗಡೆಯು ಪ್ರವೇಶವಿಲ್ಲದಿರುವುದು ಕಾಣುತ್ತೇವೆ.

### ದುರ್ಗಿಯರ ಊಟ

ಇವರು ದಲಿತ ಜನಾಂಗಕ್ಕೆ ಸೇರಿದ ದೇವದಾಸಿಯರು ಐದು ಜನ ಇರುತ್ತಾರೆ. ಒಂದು ವೇಳೆ ದೇವದಾಸಿಯಾರು ಆ ಗ್ರಾಮದಲ್ಲಿ ಒಬ್ಬರು, ಇಬ್ಬರು ಕಡಿಮೆ ಇದ್ದರೆ. ಪಕ್ಕದ ಗ್ರಾಮದಿಂದ ದೇವದಾಸಿಯಾರನ್ನು ಕರೆದುಕೊಂಡು ಬರುತ್ತಾರೆ. ಅಲ್ಲಿಯು ಸಿಗಲ್ಲಿಲ್ಲ ಎಂದರೆ, ಅದೇ ಗ್ರಾಮದ ಅದೇ ಜನಾಂಗದ ಪುರುಷ್ಯನನ್ನು ದೇವದಾಸಿಯ ರೂಪದರಿಸಿ, ವಾದ್ಯದೊಂದಿಗೆ ಹೊಳೆಗೆ(ಹಳ್ಳಕ್ಕೆ) ಕರೆದುಕೊಂಡು ಹೋಗಿ ಕುಂಕುಮ್ಮ, ಹರ್ಶಿಣ ಹಚ್ಚಿ ಗಂಗಮ್ಮಗೆ ಪೂಜೆ ಮಾಡಿಕೊಂಡು ಪುನಃ ದುರ್ಗಾಂಭಿಕಾ ದೇವಿಯ ಗುಡಿಗೆ ಬಂದು ಭಕ್ತರು ಕಂಬಳಿ ಗದ್ದಿಗೆಯ ಮೇಲೆ ಬಾಳೇ ಎಲೆ ಹಾಕಿ, ಹೋಳಿಗೆ, ಹುಗ್ಗಿ, ಅನ್ನ, ಪಲ್ಯ, ಬಾಳೇಹಣ್ಣುಗಳಿಂದ ತಯಾರಿಸಿರುವ ಆಹಾರವನ್ನು ನೋಡಿದ ದುರ್ಗಿಯರು(ದೇವದಾಸಿಯರು) ಕಾಲಿನಲ್ಲಿರುವ ಗೆಜ್ಜೆಗಳಿಂದ ಶಬ್ಧ ಮಾಡುತ್ತ ತಿನ್ನಲಿಕ್ಕೆ ರಬಸವಾಗಿ ಬಂದಾಗ, ಅವರನ್ನು ತಡೆದು ಕೈಗಳಿಂದ ಮುಟ್ಟಿಸಿ ಆ ಪ್ರಸಾದವನ್ನು ದಲಿತ ಜನಾಂಗದ ಕೇರಿಗೆ ಕೊಟ್ಟು ಬರುತ್ತಾರೆ.

### ಕೋಣ ಬಿಡುವುದು

ದುರ್ಗಾಂಭಿಕಾ ದೇವಿಗೆ ಮುತ್ತೈದೆತನ ಕೊಡುವುದಕ್ಕೆ ಮತ್ತೆ ಮುಂದಿನ ಜಾತ್ರೆಗಾಗಿ, ಮರಿಕೋಣವನ್ನು ತಂದು ಗುಡಿಯ ಸುತ್ತ ಮೂರು ಸಲ ಪ್ರದಕ್ಷಿಣೆ ಮಾಡಿಸಿ, ಊರಿನ ಪ್ರತಿ ಮನೆಗೆ ಹೋಗಿ ಎಣ್ಣೆ, ಕುಂಕುಮ ಹಾಕಿಸಿಕೊಂಡು ಬಂದು ಗುಡಿಯ ಮುಂದೆ ಕೋಣವನ್ನು ಬಿಡುತ್ತಾರೆ. ಇದನ್ನೆ ಕೋಣ ಬಿಡುವುದು ಎಂದು ಕರೆಯುತ್ತಾರೆ.

ಈ ವಿಶಿಷ್ಟ ರೀತಿಯ ಆಚರಣೆಗಳು ಅಂಬಳಿ ಗ್ರಾಮದಲ್ಲಿ ಕಾಲದಿಂದ ಕಾಲಕ್ಕೆ ಮುಂದುವರಿಸುತ್ತಾ ಹೋಗುವ ಉದ್ದೇಶ ತೊಂದರೆಗಳು ಬಾರದಿರಲಿ, ಇಲ್ಲಿಯ ಜನರು ರೋಗಗಳಿಗೆ ತುತ್ತಾಗದಿರಲಿ, ಪೂರ್ವಜರು ಆಚರಿಸುತ್ತಾ ಬಂದಿರುವ ದೇವಿಯ ಜಾತ್ರೆಯು, ಮುಂದುವರಿಸದಿದ್ದರೆ ದೇವಿಯು ಕೆಡುಕನ್ನು ಬಯಸುತ್ತಾಳೆ, ಎಂಬ ನಂಬಿಕೆಯಿಂದ ಈ ಆಚರಣೆಯನ್ನು ಮುಂದುವರಿಸುತ್ತಾ ಬರುತ್ತಿರುವುದು ಕಂಡುಬರುತ್ತದೆ.

### ೫.೩ ಹಬ್ಬಗಳು

ಭಾರತೀಯರಲ್ಲಿ ಆದರಲ್ಲೂ ಹಿಂದೂಗಳಲ್ಲಿ ಪ್ರತಿವರ್ಷಕ್ಕೊಮ್ಮೆ ತಿಂಗಳಿಗೆ. ಹದಿನೈದು ದಿನಗಳಿಗೊಮ್ಮೆ ನಡೆಯುವ ಹಬ್ಬಗಳೆಲ್ಲ ಒಂದರ್ಥದಲ್ಲಿ ಧಾರ್ಮಿಕ ಉತ್ಸವಗಳೇ ಧಾರ್ಮಿಕ ಶ್ರದ್ಧೆ, ಕ್ರಿಯೆ ಮತ್ತು ಭಾವನೆಗಳಿಗೆ ಅಲ್ಲಿ ಪ್ರಾಧಾನ್ಯತೆ ಜೊತೆಗೆ ಸಾಮಾಜಿಕ, ಸಾಂಸ್ಕೃತಿಕ ಅಂಶಗಳು ಸೇರಿಕೊಂಡಿವೆ. ನಮ್ಮ ಕೆಲವು ಹಬ್ಬಗಳು ಸಂವತ್ಸರ ಚಕ್ರದ ಮಾರ್ಗದ ಬದಲಾವಣೆಗೆ ಸಂಬಂಧಿಸಿವೆ. ಉದಾಹರಣೆಗೆ. ಮಕರ ಸಂಕ್ರಾಂತಿ ಮತ್ತು ಋತುಗಳ ಬದಲಾವಣೆಗೆ ಸಂಬಂಧಪಟ್ಟ ಹಬ್ಬಗಳು ಗಣಪತಿ ಹಬ್ಬ, ನಾಗರ ಪಂಚಮಿ. ವಿಜಯದಶಮಿ. ದೀಪಾವಳಿ. ಶಿವರಾತ್ರಿ, ಯುಗಾದಿ. ಹೋಳಿಹಬ್ಬ ಮೊದಲಾದವು.[೫]

**ಶ್ರಾವಣ ಮಾಸದ ಆಚರಣೆಗಳು**

ಶ್ರಾವಣಮಾಸ ನಾಡಿನ ಪಶುಸಂಗೋಪನೆ ಮತ್ತು ರೈತರ ಕುಟುಂಬಗಳಿಗೆ ಬಹು ಮಹತ್ವ ದಿನಗಳು. ಈ ಮಾಸದಲ್ಲಿ ಪ್ರತಿನಿತ್ಯ ಅಂದರೆ ೩೦ ದಿನಗಳವರೆಗೆ ಕಲ್ಲೇಶ್ವರ ಸ್ವಾಮಿಗೆ ಅಭಿಷೇಕ ನಡೆಯುತ್ತವೆ. ಶ್ರಾವಣ ಮಾಸದ ಕೊನೆ(ನಾಲ್ಕನೆ)ಯ ಸೋಮವಾರದಂದು ಸ್ವಾಮಿಯ ಅನ್ನ ಸಂತರ್ಪಣ ಇರುತ್ತದೆ. ಈ ದಿನ ಸ್ವಾಮಿಯ ಮೂರ್ತಿಯನ್ನು ಪಲ್ಲಕ್ಕಿಯಲ್ಲಿ ಕುದುರಿಸಿ ವಾದ್ಯಗಳೊಂದಿಗೆ ಊರ ಒಳಗೆ ಸುತ್ತುವರಿದು, ನಂತರ ರಾಮಲಿಂಗೇಶ್ವರ ದೇವಾಲಯದ ಗರ್ಭಗೃಹಕ್ಕೆ ಪಲ್ಲಕ್ಕಿಯಲ್ಲಿರುವ ಮೂರ್ತಿಯನ್ನು ಶಿವಲಿಂಗದ ಮುಂದೇ ಇಟ್ಟು ಪೂಜೆ ಮಾಡಿ ಶ್ರಾವಣ ಮಾಸದ ಕಾರ್ಯಕ್ರಮವು ಮುಕ್ತಾಯವಾಗುತ್ತದೆ.

**ಕಾರ ಹುಣ್ಣಿಮೆ**

ಕೃಷಿಕರು ಮಾಡುವ ವೈಶಿಷ್ಟ್ಯ ಪೂರ್ಣವಾದ ಆಚರಣೆ ಇದು. ಈ ಸಂಪ್ರದಾಯ ಹೆಚ್ಚಿನ ಮಟ್ಟಿಗೆ ಜೂನ್ ತಿಂಗಳಲ್ಲಿ ಮಳೆಗಾಲದಲ್ಲಿ ಆಚರಿಸುವ ಆಚರಣೆ ಇದಾಗಿದೆ. ಮಳೆ ಇಲ್ಲದಿದ್ದರೆ, ಬೆಳೆ ಇಲ್ಲ, ಮಳೆಯೇ ಬೆಳೆಗೆ ಮೂಲ, ಅದಕ್ಕಾಗಿ ರೈತರು ಕಾರ ಹುಣ್ಣಿಮೆಯನ್ನು ಅತ್ಯಂತ ಗೌರವದಿಂದ ಆಚರಿಸುತ್ತಾರೆ.[೬] ಎತ್ತುಗಳಿಗೆ ಮೈತೊಳೆದು ವಿವಿಧ ಬಣ್ಣಗಳಿಂದ ಅಲಂಕರಿಸುತ್ತಾರೆ. ಕರಗಲ್ಲಿಗೆ ಎರಡು ಗೂಟಗಳನ್ನು ಹುಗಿದು, ಮಾವಿನ ತೋರಣಗಳಿಂದ ಸಿಂಗರಿಸಿ, ಮಧ್ಯದಲ್ಲಿ ಒಣಕೊಬ್ಬರಿ ಬಟ್ಟಲನ್ನು ಕಟ್ಟಿ, ಸಂಜೆ ಎಲ್ಲಾ ರೈತ ಸಮುದಾಯದವರು ಸೇರಿ ಬಣಕಾರ ಮನೆಯಿಂದ ಎತ್ತುಗಳನ್ನು ಬಿಡುತ್ತಾರೆ. ಐದು, ಒಂಬತ್ತು, ಹನ್ನೊಂದು ಎತ್ತುಗಳಿಗೆ ಊರ ಮುಂದೇ ಕರಗಲ್ಲಿನ ಬಳಿತಂದು ನಿಲ್ಲಿಸಿ, ಬಣಕಾರರು ದೂರದಲ್ಲಿ ನಿಂತು ಎತ್ತುಗಳಿಗೆ ಕರೆಯುತ್ತಾರೆ. ಈ ಎತ್ತುಗಳಲ್ಲಿ ಯಾವುದು ಕರಗಲ್ಲಿಗೆ ದಾಟಿ ಮುಂದೇ ಬರುತ್ತದೋ, ಆ ಎತ್ತಿನ ಮನೆಯಿಂದ ಜೋಡಿ ಎತ್ತುಗಳನ್ನು ವಾದ್ಯದೊಂದಿಗೆ ಮತ್ತೆ ಕರಗಲ್ಲಿನ ಬಳಿತಂದು. ಮಠಾಧೀಶರಿಂದ ಪೂಜೆಯನ್ನು ಮಾಡಿಸಿ, ಮತ್ತೇ ವಾದ್ಯದೊಂದಿಗೆ ತಮ್ಮ ಮನೆಗೆ ಎತ್ತು ಹೊಗುತ್ತವೆ. ಈ ದಿನ ಕಡಬುಗಳನ್ನು ಮಾಡಿ ಎಲ್ಲ ದೇವರಿಗೆ ನೈವೇದ್ಯ ಮಾಡುತ್ತಾರೆ. ಈ ಊರಿನ ವಿಶೇಷವಾಗಿದೆ.

**ಪಾಂಡವರ ಹಬ್ಬ**

ಸೀಗ್ಗೆ ಹುಣ್ಣಿಮೆಯ ದಿನದಂದು ಆಚರಿಸುವ ಈ ಹಬ್ಬವನ್ನು ಹೋಳಿಗೆ, ಸಜ್ಜಿ ಕಡುಬು, ವಿಶಿಷ್ಠವಾದ ಪ್ರಸಾದವಾಗಿದೆ, ಮನೆಯ ದೇವರಿಗೆ ಶಾಂತಿ ಪೂಜೆಯನ್ನು ಮಾಡಲಾಗುತ್ತದೆ. ಹಾಗೂ ತಮ್ಮ ಕುಟುಂಬಕ್ಕೆ ಬಂದ ಕಷ್ಠ-ಕಾಪಣ್ಯಗಳನ್ನು ದೂರ ಮಾಡಿ, ಹೋಲದಲ್ಲಿ ಬೆಳೆಯು ಸಮೃದ್ಧಿಯಾಗಿ ಬರಲಿ ಎಂಬ ನಂಬಿಕೆಯಿಂದ ಹಬ್ಬವನ್ನು ಆಚರಿಸುತ್ತಾರೆ.

**ಯುಗಾದಿ**

ಯುಗಾದಿ ಫಾಲ್ಗುಣ ಬಹುಳ ಅಮವಾಸ್ಯೆಯ ದಿನ ಹಳೆಯ ವರ್ಷಕ್ಕೆ ವಿದಾಯ ಹೇಳಿ ಮರುದಿನ ಚೈತ್ರ ಶುಕ್ಲ ಪ್ರತಿಪದೆಯೆಂದು ಹೊಸವರ್ಷವನ್ನು ಸ್ವಾಗತಿಸುತ್ತೇವೆ. ಕರ್ನಾಟಕದ ಜನರಲ್ಲಿ ಒಂದು ಅರ್ಥಪೂರ್ಣ ಗಾದೆ ಇದೆ "ಉಂಡದ್ದೇ ಉಗಾದಿ, ಮಿಂದದ್ದೇ ದೀಪಾವಳಿ"

ದೀಪಾವಳಿಯಲ್ಲಿ ಅಭ್ಯಂಜನಸ್ನಾನಕ್ಕೆ ವಿಶೇಷ ಪ್ರಾಮುಖ್ಯತೆ ಇದ್ದರೆ, ಯುಗಾದಿಯಲ್ಲಿ ಭೋಜನಕ್ಕೆ ಆದ್ಯತೆ ಎಂದು ಹೇಳಬಹುದು.[೭]

ಯುಗಾದಿ ಎಂದ ಕೂಡಲೇ ನೆನಪಿಗೆ ಬರುವುದು ಬೇವು ಬೆಲ್ಲ. ಬೇವಿನ ಚಿಗುರಿನ ಕಹಿ. ಬೆಲ್ಲದ ಸಿಹಿ ಇವೆರಡು ಬದುಕಿನ ಪ್ರತೀಕ, ನೋವು-ನಲಿವುಗಳ ಸಂಕೇತ, ದೃಷ್ಯ-ಅದೃಷ್ಯಗಳ ಪ್ರತಿಬಿಂಬ ಯುಗಾದಿಯ ದಿನ ಉಷಃಕಾಲದಲ್ಲಿ ಭಗವಂತನನ್ನು ಸ್ಮರಿಸುತ್ತ ಬಲ ಮಗ್ಗುಲಲ್ಲಿ ಏಳಬೇಕು ಅಭ್ಯಂಜನ ಸ್ನಾನ ಮಾಡಿ ಹೊಸಬಟ್ಟೆ ತೊಟ್ಟು ಪ್ರಸನ್ನ ವದನರಾಗಿ ದೇವರ ಪೂಜೆ ನಡೆಸಿ, ಗುರು ಹಿರಿಯರಿಗೆ ನಮಸ್ಕಾರ ಮಾಡಿ, ಮೊದಲು ಬೇವು ಬೆಲ್ಲ ತಿಂದು, ಅನಂತರ ಹೋಳಿಗೆ ಪಾಯಸಗಳನ್ನು ಊಟ ಮಾಡುವುದು ರೂಢಿ, ಸಾಯಂಕಾಲ ಗ್ರಾಮದ ಜನರು ಸೇರಿಕೊಂಡು ವಿವಿಧ ಕ್ರೀಡೆಗಳನ್ನು ನಡೆಸುತ್ತಾರೆ.

ಸಂಜೆ ಸಮಯದಲ್ಲಿ ಪಂಚಾಂಗ ಶ್ರವಣ ಚಂದ್ರೋದಯ ಕಾಲದಲ್ಲಿ ಪೂರ್ವ ದಿಗಂತದಲ್ಲಿ ಮೂಡಿ ಬಂದಿರುವ ಒಂದು ಕಲೆಯಿಂದ ಬೆಳಗಿಸುವ ಚಂದ್ರನನ್ನು ಕಂಡು ನಮಸ್ಕರಿಸುವುದು ಈ ಗ್ರಾಮದ ಜನರ ವಿಶೇಷತೆ ಎನ್ನಲಾಗಿದೆ.

**ಗೌರಿ ಹುಣ್ಣಿಮೆ**

ಈ ಹಬ್ಬವು ದೀಪಾವಳಿಯಾದ ೧೫ ಮತ್ತು ೨೦ ದಿನಗಳ ನಂತರದಲ್ಲಿ ಬರುತ್ತದೆ. ಈ ಗೌರಿಹುಣ್ಣಿಮೆ ದಿನ ಮಕ್ಕಳೆಲ್ಲ ಸಕ್ಕರೆ ಗೊಂಬೆಗಳನ್ನು ತೆಗೆದುಕೊಂಡು ದೇವಸ್ಥಾನಕ್ಕೆ ಹೋಗಿ ಪೂಜೆ ಮಾಡಿಕೊಂಡು ಬಂದು ಮನೆ ಮನೆಗೆ ಆರತಿಯನ್ನು ಬೆಳಗುವಂತಹ ಒಂದು ವಿಶಿಷ್ಟ ಸಂಪ್ರದಾಯ ಈ ಪ್ರದೇಶದಲ್ಲಿ ಕಂಡುಬರುತ್ತದೆ. ಅಲ್ಲದೆ ಈ ಗೌರಿ ಹುಣ್ಣಿಮೆಯ ಹಬ್ಬದಲ್ಲಿ ಸಣ್ಣ ಗೌರಿಹುಣ್ಣಿಮೆ ಮತ್ತು ದೊಡ್ಡ ಗೌರಿಹುಣ್ಣಿಮೆ ಎಂದು ಎರಡು ತೆರನಾದ ಹಬ್ಬಗಳನ್ನು ಆಚರಿಸಲಾಗುತ್ತದೆ.[೮] ಸಣ್ಣ ಗೌರಿಹುಣ್ಣಿಮೆಯಲ್ಲಿ ಮೂರು ದಿನ ಗೌರಿಮಕ್ಕಳಾಗಿ ಸ್ಥಳೀಯ ಎಲ್ಲಾ ಹೆಣ್ಣು ಮಕ್ಕಳು ಸೇರಿ ಸಾಂಸ್ಕೃತಿಕ ಆಟಗಳನ್ನು ಆಡುವುದರ ಮುಖಾಂತರ ಸಂತೋಷದಿಂದ ಮೂರು ದಿನಗಳ ಕಾಲ ಕಳೆಯುವರು. ಅದೇ ರೀತಿ ದೊಡ್ಡ ಗೌರಿಹುಣ್ಣಿಮೆಯ ಹಬ್ಬದಲ್ಲಿಯೂ ಸ್ಥಳೀಯ ಎಲ್ಲ ಹೆಣ್ಣುಮಕ್ಕಳು ಐದು ದಿನಗಳ ಕಾಲ ಗೌರಿ ಪೂಜೆ ಮಾಡುವುದರ ಜೊತೆಗೆ ಅವರ ಸಾಂಸ್ಕೃತಿಕ ಆಟಗಳನ್ನು ಆಡಿ ಮನರಂಜನೆಯಿಂದ ಕಾಲ ಕಳೆಯುವರು.

**ಬಸವ ಜಯಂತಿ**

ವೈಶಾಖ ಶುದ್ಧ ತೃತೀಯವನ್ನು ಅಕ್ಷಯ ತೃತೀಯವೆಂದು ಕರೆಯುತ್ತಾರೆ. ವರ್ಷದ ಎಲ್ಲಾ ದಿನಗಳಲ್ಲಿ ಈ ದಿನ ಅತಿ ಪ್ರಮುಖ ದಿನವೆಂದು ಇಲ್ಲಿಯ ಜನರ ನಂಬಿಕೆಯಾಗಿದೆ. ಈ ದಿನ ಮೌಢ್ಯನಂಬಿಕೆಯನ್ನು ತೊಡೆದು ಭಕ್ತಿಯ ಬೀಜವನ್ನು ಬಿತ್ತಿದ ಬಸವಣ್ಣನವರ ಜನ್ಮದಿನ ಹಾಗಾಗಿ ಈ ದಿನವನ್ನು ಭಕ್ತಿಪೂರ್ವಕವಾಗಿ ಬಸವ ಜಯಂತಿ ಎಂದು ಆಚರಿಸುತ್ತಾರೆ. ವೀರಶೈವ ಮತ್ತು ರೈತಾಪಿ ವರ್ಗದವರು ಎತ್ತುಗಳಿಗೆ ಬಣ್ಣ ಹಚ್ಚಿ ಹೂವಿನಿಂದ, ಬಣ್ಣ ಬಣ್ಣದ ಬಟ್ಟೆಯಿಂದ, ರಿಬಾನ್, ಕೊಂಬಿನ ಕೋಳಬಿಯಿಂದ ಹಾಗೂ ಗಂಟೆಯ ಸರ ಅಲಂಕರಿಸಿ ಸಕಲ ವಾದ್ಯಗಳೊಂದಿಗೆ ಊರು ತುಂಬಾ ಮೆರವಣಿಗೆಯನ್ನು ಮಾಡುತ್ತಾರೆ. ಜೊತೆಗೆ ಯಾವುದೇ ಹೊಸ ಕಾರ್ಯವನ್ನು ಈ ದಿನವೇ ಮಾಡುವುದು ಈ ಜನರ ನಂಬಿಕೆಯಾಗಿದೆ.

**ನಾಗರ ಪಂಚಮಿ**

ಅಂಬಳಿ ಗ್ರಾಮದಲ್ಲಿ ಈ ಹಬ್ಬವನ್ನು ಮೂರು ದಿನಗಳಕಾಲ ಆಚರಿಸಲಾಗುವುದು. ಮೊದಲನೆಯ ದಿನ, ಅಮವಾಸ್ಯೆಯಂದು ತಮ್ಮ ಮನೆಯ ದೇವರಿಗೆ ತೆಂಗಿನ ಕಾಯಿ ಮತ್ತು ಬಾಳೇಹಣ್ಣುಗಳಿಂದ ಪೂಜೆ ಮಾಡಿ. ದರ್ಶನ ಪಡೆದು, ರೈತರು ಎತ್ತುಗಳಿಗೆ ಮೈತೊಳೆದು ವಿವಿಧ ಬಣ್ಣಗಳಿಂದ ಅಲಂಕರಿಸುವುದು ಹಾಗೂ ತಮ್ಮ ಭೂಮಿಯಲ್ಲಿ ಕೊಳವೆ ಬಾವಿಗಳಿಗೆ ಪೂಜೆ ಮಾಡುವುದು ವಿಶೇಷ. ಎರಡನೇ ದಿನ, ಚೌತಿ ದಿನದಂದು ನಾಗಹುತ್ತ ಅಥವಾ ಕಲ್ಲಿನ ನಾಗರ ಮೂರ್ತಿಗೆ ಹಾಲನ್ನು ಎರೆದು, ನೈವೇದ್ಯ ಮಾಡುವುದು ಜೊತೆಗೆ ಊರಿನ ಎಲ್ಲಾ ಪ್ರಮುಖ ದೇವರಗಳಿಗೆ ಕಡ್ಲಿಹುಂಡೆ, ಗಾರಿಗೆ, ಎಳುಹುಂಡೆ, ಉರೆಕ್ಕಿ ಹುಂಡೆ, ಅನ್ನ ಕಡಬು ಮತ್ತು ವಿವಿಧ ಖಾದ್ಯಗಳಿಂದ ನೈವೇದ್ಯ ಮಾಡುತ್ತಾರೆ. ಮೂರನೇ ದಿನ, ಹೋಳಿಗೆ ಜೊತೆಗೆ ಬೇರೆ ಬೇರೆ ಖಾದ್ಯವನ್ನು ಮಾಡಿ ಮನೆಯ ದೇವರಿಗೆ ಮತ್ತು ನಾಗರ ಮೂರ್ತಿಗೆ ಎಡೆ ಇಟ್ಟು ಪೂಜೆ ಮಾಡುವುದು ಈ ಊರಿನ ವಿಶೇಷತೆವಾಗಿದೆ.

ಈ ದಿನ ಸಂಜೆ ವಿವಿಧ ಕ್ರೀಡೆಗಳನ್ನು ಆಡುತ್ತಾರೆ. ನಿಂಬೆಹಣ್ಣು ಎಸೆಯುವುದು, ಕಾಯಿ ಹೊಡೆಯುವುದು, ಕಣ್ ಕಟ್ಟುವುದು, ಇತ್ಯಾದಿ ಮನೋರಂಜನೆ ನಡೆಯುತ್ತವೆ.

**ದೀಪಾವಳಿ**

ಹಿಂದೂಗಳು ಆಚರಿಸುವ ದೊಡ್ಡ ಹಬ್ಬಗಳಲ್ಲಿ ದೀಪಾವಳಿ ಮುಖ್ಯವಾದುದು. ಇದು ಪ್ರಾಂತ್ಯ ಭೇದವಿಲ್ಲದೆ, ಭಾರತದ ಎಲ್ಲ ಭಾಗಗಳಲ್ಲೂ ಆಚರಿಸಲಾಗುತ್ತದೆ. 'ಹಬ್ಬಗಳ ರಾಜ' ಎನ್ನಬಹುದಾಗಿದೆ, ದೀಪಾವಳಿಗೆ ರಾಷ್ಟ್ರೀಯ ವ್ಯಾಪ್ತಿ ಇದೆ. ದೀಪಾಲಿ-ದೀಪಾಲಿಕಾ-ದೀಪಾವಳಿ ಇವೆಲ್ಲ ಇದರ ನಾಮಾಂತರಗಳು. ಪೌರಾಣಿಕ ಮತ್ತು ಸಾಂಸ್ಕೃತಿಕ ದೃಷ್ಟಿಯಿಂದ ಇದು ತುಂಬ ಮಹತ್ವದ ಹಬ್ಬ. ಇದು ಕತ್ತಲೆ-ಬೆಳಕುಗಳ ನಿರಂತರ ಹೋರಾಟದಲ್ಲಿ ಬೆಳಕು ಚೆಲ್ಲುವುದರ ಸಂಕೇತ. ಎಲ್ಲ ಜೀವಿಗಳ ಆಧಾರ, ಸಕಲ ಕ್ರಿಯೆಗಳ ಪ್ರೇರಕ, ಒಂದರ್ಥದಲ್ಲಿ ಬೆಳಕೇ ಬದುಕು.

**ಮುಸ್ಲಿಂ ಹಬ್ಬಗಳು**

ಈದ್-ಎ-ರಂಜಾನ್ ಎಂದು ಕರೆಯುವ ಇದು ಕುತುಬ್-ಎ-ರಂಜಾನ್ ಈದುಲ್ ಫಿತರ್ ಮೊದಲಾದ ಹೆಸರುಗಳಿಂದ ಪ್ರಸಿದ್ಧವಾದ ರಂಜಾನ್ ಹಬ್ಬವು ಮುಸ್ಲೀಮರ ದೊಡ್ಡ ಹಬ್ಬ ರಂಜಾನ್ ಮಾಸದ ಕೊನೆಯಲ್ಲಿ ಚಂದ್ರದರ್ಶನವಾದ ನಂತರ ಆಚರಿಸುತ್ತಾರೆ. ರಂಜಾನ್ ಒಂದು ತಿಂಗಳ ಪೂರ್ತಿ ದಾನ, ಉಪವಾಸ ವ್ರತಾದಿಗಳಿಂದ ಆಚರಿಸಲ್ಪಡುವುದು, ಉಪವಾಸ ಇತರರ ದುಃಖ-ಸುಖಗಳ ವಿವೇಚನೆಯನ್ನು ತರುತ್ತದೆ. ಪ್ರತಿ ಮುಸ್ಲಿಂನು ಉಪವಾಸವ್ರತ ಆಚರಿಸುತ್ತಾರೆ.[೧೦] ಈ ದಿನಗಳಲ್ಲಿ ಬಡವ-ಬಲ್ಲಿದ ಎಲ್ಲರೂ ಉಪವಾಸ ಮಾಡುತ್ತಾರೆ. ದೀನ-ದಲಿತರಿಗೆ, ಬಡವರಿಗೆ, ಜಾಕತ್(ದಾನ) ಮಾಡುವುದು ಪದ್ಧತಿಯಾಗಿದೆ. ರಂಜಾನ್ ತಿಂಗಳಲ್ಲಿ ಪವಿತ್ರ ಖುರಾನ್ ಮೊದಲುಗೊಂಡದ್ದು ಎಂದು ರಂಜಾನ್ ತಿಂಗಳ ೨೭ನೇ ದಿನ ಪವಿತ್ರ ರಾತ್ರಿ ಎಂದು ಆ ರಾತ್ರಿ 'ಲೈಲತ್ ಉಲ್ ಖದಕ್' ಅಥವಾ ಶಕ್ತಿ ರಾತ್ರಿ ಎಂದು ಕರೆಯುತ್ತಾರೆ. ಸ್ವರ್ಗದ ಬಾಗಿಲು ತೆರೆದಿರುತ್ತದೆಂದೂ ಮುಸ್ಲಿಂರು ನಂಬುತ್ತಾರೆ. ದಿನಕ್ಕೆ ೫ ಬಾರಿಯಂತೆ. ರಾತ್ರಿ ೮ರಿಂದ ೧೦:೩೦ ರವರೆಗೆ 'ತೆರಾವಿ ನಮಾಜ್' ಸಲ್ಲಿಸುತ್ತಾರೆ. ಖುರಾನಿನ ಸೂರಾಗಳನ್ನು ಓದಿ

ಲೈಲಕ್‌ಉಲ್ ಖಿದರ್‌ನ ಕೊನೆಯಲ್ಲಿ ಮುಗಿಸುತ್ತಾರೆ. ಇದರಲ್ಲಿ ಸಾಮೂಹಿಕ ಪ್ರಾರ್ಥನೆ ಅಲ್ಲಾನ ಹೊರತು ಪೂಜೆ ಯಾರು ಅರ್ಹರಲ್ಲ ಎಂದು ನಂಬುತ್ತಾರೆ. ಇದರ ಹಾಗೆ 'ಬಖಿರ್-ಈದ್(ಈದ್-ಜಹಾ) ಜಿಲ್ ಹಜ್‌ಮಾಸದ ಹತ್ತನೆಯದಿನ ಈ ಹಬ್ಬ ಆಚರಿಸುತ್ತಾರೆ. ಇಬ್ರಾಹಿಂ ತನ್ನ ಪುತ್ರನಾದ ಇಸ್ಮಾಯಿಲ್‌ನನ್ನು ದೇವರು ಅಪೇಕ್ಷಿಸಿದ ಎಂಬುದಾಗಿ ತಲೆ ಕಡೆಯುತ್ತಾನೆ. ಆದರೆ ಚಮತ್ಕಾರ ಎಂಬಂತೆ ಮಗ ಅಲ್ಲಿಯೇ ನಿಂತಿರುತ್ತಾನೆ. ಇದನ್ನು ತ್ಯಾಗ, ನಿಷ್ಠೆ, ಸವಿನೆನಪಿಗಾಗಿ ಆಚರಿಸುತ್ತಾರೆ.' ಈ ಎಲ್ಲಾ ಆಚರಣೆ ಅಂಬಳಿ ಗ್ರಾಮದಲ್ಲಿ ಕಂಡುಬರದಿದ್ದರೂ ಇತ್ತೀಚಿನ ದಿನಮಾನಗಳಲ್ಲಿ ಮಸೀದಿ. ಮದರಸಗಳ ನಿರ್ಮಾಣದಿಂದಾಗಿ ಮೌಲ್ವಿಗಳ ಉಪದೇಶಗಳಿಂದಾಗಿ ದೇವರು, ಧರ್ಮದ ಬಗ್ಗೆ ಆಸಕ್ತಿ ಹೊಂದಿ ಮುಸ್ಲಿಂ ಬಾಂಧವರು ಸಕ್ರೀಯವಾಗಿ ಭಾಗವಹಿಸುತ್ತಿದ್ದಾರೆ. ಮಸೀದಿಗಳನ್ನು ಸರ್ಕಾರ ಮತ್ತು ಖಾಸಗಿಯವರು ನಿರ್ಮಿನಿಕೊಟ್ಟು ಪ್ರಾರ್ಥನೆಗೆ ಅನುಕೂಲ ಮಾಡಿದ್ದಾರೆ. 'ಮೊಹರಂ' ಈ ಗ್ರಾಮದಲ್ಲಿ ಕಂಡುಬರುವ ಸರ್ವೇಸಾಮಾನ್ಯವಾದ ಹಬ್ಬವಾಗಿದೆ. ಇದೊಂದು ಸಂಭ್ರಮದ ಹಬ್ಬವಲ್ಲದಿದ್ದರೂ ಹಿಂದೂಗಳು, ಮುಸ್ಲಿಂರೊಂದಿಗೆ ಬೆರೆತು ಶ್ರದ್ಧೆ-ಭಕ್ತಿಗಳಿಂದ ಆಚರಿಸಿ ಮೂರು ದಿನಗಳ ಕಾಲ ಹುಲಿ, ಕರಡಿ ಇತರೇ ವೇಷ ಧರಿಸಿ ತಮ್ಮ ಹರಕೆ ಸಲ್ಲಿಸುವ ವಾಡಿಕೆ ಈ ಗ್ರಾಮದ ಜನರಲ್ಲಿ ಕಂಡುಬರುತ್ತದೆ.

**೫.೪ ಐತಿಹ್ಯಗಳು**

ವಾಸ್ತವವಾಗಿ ನಡೆದಿದೆ ಎಂದು ನಂಬಿಕೊಂಡು ಬಂದಿರುವ ಅಸಾಮಾನ್ಯ ಘಟನೆಯೊಂದರ ಸುತ್ತ ಹೆಣೆದಿರುವ ಕಥೆಯೇ ಐತಿಹ್ಯವೆನಿಸುತ್ತದೆ. ಪ್ರಾಚೀನ ಕಾಲದ ಯಾವುದೋ ಒಂದು ಸಣ್ಣ ಚಾರಿತ್ರಿಕ ಘಟನೆಯ ಸುತ್ತ ಪರಂಪರಾಗತವಾಗಿ ಬಂದಿರಬಹುದಾದ ಸನ್ನಿವೇಶಗಳು ಬೆಳೆದು ತಲೆಮಾರುಗಳ ಮೂಲಕ ಹರಿದು ಬರುವಾಗ ಕಥೆಯಾಗಿ ರೂಪಾಂತರಗೊಂಡರೆ ಅಂತಹವನ್ನು ಐತಿಹ್ಯವೆನ್ನಲಾಗುತ್ತದೆ. ಇದು ನಿರ್ಧಿಷ್ಟ ಸ್ಥಳ, ವ್ಯಕ್ತಿ, ಧಾರ್ಮಿಕ ಸಾಮಾಜಿಕ ಅಂಶಗಳ ಸುತ್ತ ಹೆಣೆದುಕೊಂಡಿರುತ್ತದೆ. ಅಂದರೆ ರಾಮಾಯಣ, ಮಹಾಭಾರತದಂತಹ ಪುರಾಣ ಸಂಬಂಧಿ ವಿವರಗಳು ಕೂಡ ಐತಿಹ್ಯದ ತೆಕ್ಕೆಗೆ ಬರುವ ಸಾಧ್ಯತೆಗಳು ಇವೆ.

ಐತಿಹ್ಯ ಪದವನ್ನು Legend ಎಂಬ ಇಂಗ್ಲೀಷ್ ಪದದ ಸಂವಾದಿಯಾಗಿ ಉಲ್ಲೇಖಿಸಲಾಗುತ್ತದೆ. ಇದು ಮೂಲತಃ ಧಾರ್ವಿಕ ರೀತಿಯ ಕಥನಕ್ಕೆ ಬಳಕೆಯಾಗುತ್ತಿತ್ತು. ಅಂದರೆ ಸಾಧು (ನಿರ್ಲಿಪ್ತ, ನಿರ್ವಿಕಾರ, ನಿರಹಂಕಾರ) ಜೀವನ ಅಥವಾ ಅಂಥ ಕಥೆಗಳ ಸಂಗ್ರಹವನ್ನು ಸೂಚಿಸುತಿದ್ದಂತೆ ಸೋರುತ್ತದೆ. ಈ ಎಲ್ಲಾ ವಿವರಗಳನ್ನು ಗಮನಿಸಿದಾಗ ಐತಿಹ್ಯದ ಅರ್ಥವ್ಯಾಪ್ತಿಯು ನಿಘಂಟುಗಳಲ್ಲಿರುವದಕ್ಕಿಂತ, ಸ್ವಲ್ಪಮಟ್ಟಿಗೆ ಬೇರೆಯೇ ಆಗಿರುವ ಸೂಚನೆಗಳ ಕಂಡು ಬರುತ್ತವೆ. ನಾಚಿರಾಜನ ಪ್ರಕಾರ ಐತಿಹ್ಯಕ್ಕೆ ಪ್ರಮಾಣಬೇಡ. ನಿಜಗೂಣ ಶಿವಯೋಗಿಯ ಪ್ರಕಾರ ಲೋಕವಾರ್ತೆಯೇ ಐತಿಹ್ಯಕ್ಕೆ ಪ್ರಮಾಣ (ಕರ್ನಾಟಕ ಜಾನಪದ ಕೈಪಿಡಿ;ಪು೨೭) ಸುಮಾರು ೧೪-೧೫ನೇ ಶತಮಾನದಲ್ಲಿ ಇಂತಹ ಚರ್ಚೆಗಳು ನಡೆದವು. ಇಂಗ್ಲೀಷ್‌ಗಿಂತ ಮೊದಲೇ ನಮ್ಮಲ್ಲಿ ಐತಿಹ್ಯದ ಕಲ್ಪನೆ ಮೂಡಿರುವುದು ಖಚಿತವಾಗುತ್ತದೆ.

**ಸ್ಥಳನಾಮದ ಐತಿಹ್ಯ**

ಕಲ್ಲೇಶ್ವರ ದೇವಾಲಯ ಮತ್ತು ರಾಮಲಿಂಗೇಶ್ವರ ದೇವಾಲಯವನ್ನು ಅನ್ನದ ಅಂಬಲಿ ಮಾಡುವುದರ ಒಳಗಾಗಿ ಈ ದೇವಾಲಯಗಳನ್ನು ಕಟ್ಟಿದರು ಹಾಗಾಗಿ ಈ ಊರಿಗೆ ಅಂಬಲಿ ಅಂತ ಹೆಸರು ಬಂದಿದೆ. ನಂತರ ದಿನಗಳಲ್ಲಿ ಜನರ ಆಡುಮಾತಿನಲ್ಲಿ ಅಂಬಲಿ> ಅಂಬಳಿ ಎಂದು ಬದಲಾಗಿದೆ ಎಂದು ಐತಿಹ್ಯದಿಂದ ತಿಳಿದುಬರುತ್ತದೆ.

**ಕಲ್ಲೇಶ್ವರ ಶಿವಲಿಂಗದ ಐತಿಹ್ಯ**

ಈ ಗ್ರಾಮದಲ್ಲಿ ಗೌಡರ ಮನೆಯಲ್ಲಿ ಹಸುಗಳು ಹೆಚ್ಚಿಗೆ ಇದ್ದವು. ಅವುಗಳನ್ನು ಮೇಯಲು ಹಳ್ಳದ ದಂಡೆಯಲ್ಲಿ ಅಂದರೆ ಈಗಿನ ಕಲ್ಲೇಶ್ವರ ದೇವಾಲಯ ಇರುವ ಜಾಗವು ಅನೇಕ ಮರ, ಇಸಿಲ ಪಳ್ಳಿ, ಗಿಡ, ಬಳ್ಳಿಗಳ  ವಿಶಾಲ ಪ್ರದೇಶದಲ್ಲಿ ಹಸುಗಳು ಅಲ್ಲಿಗೆ ಬಂದು ಮೇಯುತ್ತಿದ್ದವು. ಒಂದು ದಿನ ಹಸುವೊಂದು ಕರುವನ್ನು ಹಾಕಿದಾಗ ಗೌಡರಿಗೆ ಎಲ್ಲಿಲ್ಲದ ಸಂತೋಷವಾಯಿತು. ದಿನಾಲು ಗೌಡರು ಹಸುವಿನ ಹಾಲನ್ನು ಕರೆಯುತ್ತಿದ್ದರು, ಕೆಲವು ದಿನಗಳ ನಂತರ ಒಂದು ದಿನ ಅಕಳದ ಕೆಚ್ಚಲಲ್ಲಿ ಹಾಲು ಇಲ್ಲದಿರುವುದನ್ನು ಕಂಡ ಗೌಡರು ಕರು ಹಾಲನ್ನು ಕುಡಿದಿರಬೇಕು ಎಂದು ತಿಳಿದರು, ಇದೇ ರೀತಿ ಒಂದು ವಾರದವರಗೆ ಕೆಚ್ಚಲಲ್ಲಿ ಹಾಲು ಇಲ್ಲದಿರುವುದನ್ನು ಕಂಡು ಒಂದು ದಿನ ಹಸುವನ್ನು ಮೇಯಿಸುವುದಕ್ಕೆ ಬಿಟ್ಟು ಗಿಡದ ಮರೆಯಲ್ಲಿ ನಿಂತು ನೋಡಿದಾಗ ಹಸು ಇಸಿಲ ಪಳ್ಳಿಯಲ್ಲಿ ಶಿವಲಿಂಗಕ್ಕೆ ಹಾಲು ಉಣಿಸುತ್ತಿರುವುದನ್ನು ಕಂಡ ಗೌಡರು ಕೈಮುಗಿದು ಮನೆಗೆ ಬಂದರು. ಗೌಡರು ರಾತ್ರಿ ನಿದ್ದೆಯಲ್ಲಿರುವಾಗ ಕಲ್ಲೇಶ್ವರ ದೇವರು ಕನಸಿನಲ್ಲಿ ಬಂದು ಈ ಊರಿನ ಹಳ್ಳದ ದಂಡೆಯ ಇಸಿಲ ಪಳ್ಳಿಯಲ್ಲಿ ನಾನು ಇರುವೆನು ಇಲ್ಲಿಯೇ ನನ್ನ ಗುಡಿಯನ್ನು ಕಟ್ಟಬೇಕು, ಎಂದು ಹೇಳಿದ ವಿಷಯವನ್ನು ಊರಿನ ದೈವಸ್ಥರಿಗೆ ತಿಳಿಸಿದಾಗ, ದೈವಸ್ಥರು ಮತ್ತು ಗೌಡನು ಸೇರಿ ದೇವರ ಆಸೆಯಂತೆ ಕಲ್ಲೇಶ್ವರ ದೇವಾಲಯವನ್ನು ಸ್ಥಾಪಿಸಿದರು ಎಂದು ಹೇಳಲಾಗುತ್ತದೆ.

**ಹೊಸಹಳ್ಳಿ ತೋಟದ ಐತಿಹ್ಯ**

ಅಂಬಳಿ ಗ್ರಾಮದ ಆಗ್ನೇಯ ದಿಕ್ಕಿನಲ್ಲಿರುವ ಈ ಹೊಸಹಳ್ಳಿ ಊರು ಇಂದು ಪಳಾಗಿ ಹೊಸಹಳ್ಳಿ ತೋಟ ಎಂದು ಕರೆಯಲ್ಪಟ್ಟಿದೆ. ಇತ್ತೀಚಿನ ೧೬-೧೭ನೆ ಶತಮಾನದ್ದಾಗಿದ್ದು, ಇಲ್ಲಿಯ ಜನರು ಪ್ಲೇಗ್ ರೋಗಕ್ಕೆ ಒಳಗಾಗಿ ಊರನ್ನು ತೊರೆದು ಅಕ್ಕ-ಪಕ್ಕದ ಗ್ರಾಮಗಳಿಗೆ ಹೋಗಿ ವಾಸವಾಗಿದ್ದಾರೆ. ಇವರು ನಿರ್ಮಿಸಿದ ದೇವರುಗಳಾದ ಆಂಜನೇಯ, ಶಿವಲಿಂಗ ಮೂರ್ತಿಗಳು ಹಾಗೂ ವಾಸ ಮಾಡಿದ ಮನೆಗಳ ಮತ್ತು ಬಳಕೆ ಮಾಡಿದ ಅವಶೇಷಗಳು ಇಂದಿಗೂ ಕಂಡುಬರುತ್ತವೆ. ಇಲ್ಲಿ ಮಣ್ಣಿನ ದಿಬ್ಬವಿದ್ದು ಇದರಲ್ಲಿ ಜನರ ಸಾಮೂಹಿಕವಾಗಿ ಶವಸಂಸ್ಕಾರ ಮಾಡಿರುವ ದಿಬ್ಬವಾಗಿದೆ ಎಂದು ಸುತ್ತ ಮುತ್ತಲಿನ ಈ ಭೂಮಿಯನ್ನು ಉಳಿಮೆ ಮಾಡುವ ರೈತರು ಹೇಳುತ್ತಾರೆ.

## ಕೊನೆ ಟಿಪ್ಪಣಿಗಳು

೧. ಮಲ್ಲಿಕಾರ್ಜುನ ಶ್ರೀಲಿಶ್ರೈ, ಕರ್ನಾಟಕ ಜಾತ್ರೆಗಳು ವಿಚಾರ ಸಂಕಿರಣ ಪ್ರಬಂಧಗಳು, ಪು, ೩
೨. ನರಸಿಂಹ ಮೂರ್ತಿ ಹೆಚ್.ವಿ., ನಮ್ಮ ಹಬ್ಬಗಳು, ಪು, ೩೮
೩. ಚನ್ನಬಸಪ್ಪ ಎಸ್., ನೀಲಗುಂದ ಪರಿಸರದ ಸಾಂಸ್ಕೃತಿಕ ಅಧ್ಯಯನ, (ಅಪ್ರಕಟಿತ ಎಂ.ಫಿಲ್ ಸಂಪ್ರಬಂಧ), ಪು, ೮೬
೪. ಅದೇ, ಪು, ೮೮
೫. ಅದೇ, ಪು, ೮೯
೬. ಚೆನ್ನಣ್ಣ ವಾಲಿಕಾರ, ಹೈದರಾಬಾದ್ ಕರ್ನಾಟಕ ಗ್ರಾಮ ದೇವತೆಗಳ ಒಂದು ಅಧ್ಯಯನ, ಪು, ೧೪೦
೭. ಡಿ.ಟಿ. ರಂಗಸ್ವಾಮಿ, ಭಾರತದ ಹಬ್ಬಗಳು, ಪು, ೩೦
೮. ಅದೇ, ಪು, ೭೨
೯. ಡಿ.ಟಿ. ರಂಗಸ್ವಾಮಿ, ಪೂರ್ವೋಕ್ತ, ಪು, ೩೨

# ಅಧ್ಯಾಯ - ಆರು

## ಸಮಾರೋಪ

ಕರ್ನಾಟಕದ ಪ್ರತಿಯೊಂದು ಹಳ್ಳಿಯು ಭಾರತೀಯ ಚಾರಿತ್ರಿಕ ಮತ್ತು ಸಾಂಸ್ಕೃತಿಕ ವಲಯಕ್ಕೆ ಅಪಾರವಾದ ಕೊಡುಗೆಯನ್ನು ನೀಡಿವೆ. ಇತಿಹಾಸ ಅಧ್ಯಯನದಲ್ಲಿ ಹಳ್ಳಿಗಳ ಚರಿತ್ರೆಯನ್ನು ಕಡೆಗಣಿಸಿ, ಕೇವಲ ರಾಜಮಹಾರಾಜರು ನಡೆಸಿದ ಕದನಗಳ ಜಯಾಪಜಯಗಳಿಗೆ ಸಂಬಂಧಿಸಿದ ರಾಜಕೀಯ ಸಂಗತಿಗಳನ್ನು ಮಾತ್ರ ದಾಖಲಿಸಲಾಗಿತ್ತು ಆದರೆ ಕಾಲ ನಂತರದಲ್ಲಿ ಚರಿತ್ರೆಯಲ್ಲಿ ಬರವಣಿಗೆಯಲ್ಲುಂಟಾದ ಬದಲಾವಣೆಯಿಂದ ಇತಿಹಾಸವೆಂದರೆ ಕೇವಲ ರಾಷ್ಟ್ರವೊಂದರ ರಾಜಕೀಯ ಚರಿತ್ರೆಯಲ್ಲಿ, ಆದು ರಾಷ್ಟ್ರ, ರಾಜ್ಯ, ಪ್ರಾಂತ್ಯ, ಪ್ರದೇಶ, ನಗರ, ಗ್ರಾಮ, ಸಂಸ್ಥೆ, ಜನಾಂಗವೊಂದರ ಹಾಗೂ ಸಾಮಾನ್ಯ ಜನತೆಯ ಕಥೆಯಾಗಿದೆಂಬುದನ್ನು ಅರಿತು ಪ್ರತಿಯೊಂದು ಹಳ್ಳಿಯ ಇತಿಹಾಸವನ್ನು ಮತ್ತೊಮ್ಮೆ ಮರು ಜೋಡಣೆ ಮಾಡಿ ಸ್ಥಳೀಯ ಮಟ್ಟದ ಸೂಕ್ಷ್ಮ ಅಧ್ಯಯನಗಳನ್ನು ನಡೆಸುವುದು ಅನಿವಾರ್ಯವಾಯಿತು. ಇದರಿಂದ ಕೇವಲ ರಾಜಕೀಯ ಸಂಗತಿಗಳನಷ್ಟೇ ಅಲ್ಲದೇ ಆರ್ಥಿಕ, ಸಾಮಾಜಿಕ, ಚಾರಿತ್ರಿಕ, ಧಾರ್ಮಿಕ ಹಾಗೂ ಸಾಂಸ್ಕೃತಿಕ ಎಂಬ ಹತ್ತು ಹಲವು ಸಂಗತಿಗಳನ್ನು ದಾಖಲಿಸುವ ಪ್ರಯತ್ನಗಳು ಸಾಗಿಬಂದವು. ಅಂಬಳಿ ಗ್ರಾಮದಲ್ಲಿ ಲಭ್ಯವಿರುವ ಸಾಹಿತ್ಯ, ಪುರಾತತ್ವೀಯ, ಮೌಖಿಕ, ಆಕರಗಳಿಂದಷ್ಟೇ ಅಲ್ಲದೇ ಕ್ಷೇತ್ರ ಕಾರ್ಯದ ನೆರವಿನಿಂದ ಕಂಡುಕೊಂಡ ಇಲ್ಲಿನ ಇತಿಹಾಸಸ್ಥಳೀಯ ಚರಿತ್ರೆ ಮತ್ತು ಸಂಸ್ಕೃತಿಯನ್ನು ಬರಹದ ರೂಪದಲ್ಲಿ "ಅಂಬಳಿ: ಒಂದು ಸಾಂಸ್ಕೃತಿಕ ಅಧ್ಯಯನ" ಎಂಬ ಪ್ರೌಢಪ್ರಬಂಧದಲ್ಲಿ ದಾಖಲಿಸುವ ಸಣ್ಣ ಪ್ರಯತ್ನವನ್ನು ಮಾಡಿದೆನೆ.

ಪ್ರಸ್ತುತ ಅಧ್ಯಯನವನ್ನು ಊರಿನ ಆಗ್ನೇಯ ದಿಕ್ಕಿನಲ್ಲಿರುವ ಪಾಳೂರಾದ ಹೊಸಹಳ್ಳಿ ತೋಟವನ್ನು ಕ್ಷೇತ್ರಕಾರ್ಯದಿಂದ ಗುರುತಿಸಲಾಗಿದೆ. ಇಲ್ಲಿನ ಸುತ್ತಮುತ್ತಲಿನ ಪ್ರದೇಶವು ಫಲವತ್ತಾದ ಭೂಮಿಯಿಂದ ಕೂಡಿದ್ದು ಉಳುಮೆ ಮಾಡಲು ಜನರು ಇಲ್ಲಿಯೆ ವಾಸವಾಗಿ, ತದನಂತರ ಯಾವುದೋ ರೋಗಕ್ಕೆ ಒಳಗಾಗಿ ಊರನ್ನು ತೊರೆದಿರುವುದು ಅಲ್ಲಿಯ ಅವಶೇಷ, ದೇವರ ಶಿಲ್ಪಗಳು, ಮನೆಯ ವಸ್ತುಗಳು ಲಭ್ಯವಾದ ಆಕರಗಳ ಹಿನ್ನೆಲೆಯಲ್ಲಿ ಕಟ್ಟಿಕೊಡಲು ಪ್ರಯತ್ನಿಸಲಾಗಿದೆ. ಇಲ್ಲಿನ ಭೌಗೋಳಿಕ ಪರಿಸರವು ಜಾಲಿ, ಕುರುಚಲು ಗಿಡ, ಹಳ್ಳ-ಕೊಳ್ಳ ಹಾಗೂ ಕೆರೆ-ಕುಂಟೆಗಳಿಂದ ವಿಶಾಲ ಫಲವತ್ತಾದ ಭೂಮಿಯಿಂದ ವೈವಿಧ್ಯಮಯವಾಗಿದೆ. ಸ್ಥಳನಾಮದ ಕುರಿತು ಶಾಸನದಲ್ಲಿ ಅಮ್ಮೆಳೆ-ಅಮ್ಮಳೆ-ಅರ್ಮಳೆ ಎಂದು ಉಲ್ಲೇಖವಿದೆ. ಹಾಗಾಗಿ ಅಮ್ಮೆಳೆ-ಅರ್ಮಳೆ-ಅಂಬಲಿ ಬದಲಾಗುತ್ತ ಇಂದಿನ "ಅಂಬಳಿ" ಎಂಬ ಹೆಸರಿನಿಂದ ಕರೆಸಿಕೊಂಡಿದೆ.

ಇಲ್ಲಿನ ಪರಿಸರದಲ್ಲಿ ಶಿಲಾಯುಗ ಕಾಲದ ಯಾವುದೇ ಕುರುಹುಗಳು ಕಂಡು ಬರುವುದಿಲ್ಲ ಆದರೆ ಈ ಪ್ರದೇಶದಿಂದ, ೨೫-೩೦ ಕಿ.ಮೀ. ದೂರದಲ್ಲಿರುವ ಗ್ರಾಮಗಳಲ್ಲಿ ಆದಿ ಹಳೆಯ ಶಿಲಾಯುಗ, ನವಶಿಲಾಯುಗ, ಬೃಹತ್ ಶಿಲಾಯುಗ, ಹೀಗೆ ವಿವಿಧ ಶಿಲಾಯುಗದ ಕುರುಹುಗಳು ಕಂಡುಬರುವುದರಿಂದ ಅಂಬಳಿ ಗ್ರಾಮದಲ್ಲಿ ಹೆಚ್ಚಿನ ಸಂಶೋಧನೆಯನ್ನು ಕೈಗೊಂಡರೆ ಕುರುಹುಗಳು ಸಿಗಬಹುದು ಎಂಬು ನನ್ನ ಆನಿಸಿಕೆ.

ಚಾರಿತ್ರಿಕ ಯುಗಕ್ಕೆ ಸಂಬಂಧಿಸಿದಂತೆ ಇತಿಹಾಸದಲ್ಲಿ ಆಡಳಿತ ನಡೆಸಿದ ರಾಜಮನೆತನಗಳಲ್ಲಿ ಯಾವೊಂದು ರಾಜ ಮನೆತನವು ನಿರ್ದಿಷ್ಟವಾಗಿ ಇಲ್ಲಿ ಆಡಳಿತ ನಡೆಸಿರುವುದಿಲ್ಲ, ಆದರೂ ಇಲ್ಲಿನ ಚಾರಿತ್ರಿಕ ಇತಿಹಾಸ ಮೌರ್ಯರ ಕಾಲದಿಂದ ಸ್ವಾತಂತ್ರ್ಯ ಚಳವಳಿಯ ಕಾಲಘಟ್ಟದವರೆಗೆ ವಿಸ್ತಾರಗೊಂಡಿರುವುದು ತಿಳಿದುಬಂದಿದೆ. ಕಲ್ಯಾಣ ಚಾಲುಕ್ಯರು, ಕಲಚೂರಿಗಳು, ಯಾದವರು, ಹೊಯ್ಸಳರು, ವಿಜಯನಗರ ಅರಸರು ಸೇರಿದ್ದಾರೆ. ಅವರಿಗೆ ಬೆಂಬಲವಾಗಿ ಮಹಾಸಾಮಂತ ಅಥವಾ ಮಹಾಮಂಡಳೇಶ್ವರರಾದ ನೊಳಂಬರು(ಪಲ್ಲವರು), ಕದಂಬರು, ಪಾಂಡ್ಯರು, ಸಿಂಧರು ಪ್ರಮುಖರಾಗಿದ್ದಾರೆ. ಇವರು ನೊಳಂಬವಾಡಿ-೩೨೦೦೦ದಲ್ಲಿ ಸಿಂಧವಾಡಿ-೧೦೦೦೦, ಕದಂಬಳಿಗೆ-೧೦೦೦೦, ಆದವಾನಿ-೫೦೦, ಕೋಗಳಿ-೫೦೦, ಕೊಟ್ಟೂರು-೧೨, ಬೆಣ್ಣೆಕಲ್ಲು-೧೨, ಉಚ್ಚಂಗಿ-೩೦ ಹೀಗೆ ಆಡಳಿತಕ್ಕೆ ಸಂಬಂಧಿಸಿದ ಶಾಸನಗಳು, ಶಾಸನಶಿಲ್ಪಗಳು, ಕೆರೆಕಟ್ಟೆಗಳು, ದೇವಾಲಯಗಳು, ದೇವತಾಮೂರ್ತಿ ಶಿಲ್ಪಗಳೆಂಬ ಮೊದಲಾದ ಸ್ಮಾರಕಗಳ ಕುರಿತಾಗಿ ಒದಗಿಬಂದ ಮಾಹಿತಿಯ ಹಿನ್ನೆಲೆಯಲ್ಲಿ ಈ ಪ್ರದೇಶವು ಧಾರ್ಮಿಕ ಮತ್ತು ಸಾಂಸ್ಕೃತಿಕವಾಗಿ ಅ ದ್ವಿತೀಯವಾದ ಸ್ಥಾನ ಪಡೆದಿರುವುದು ದೃಢವಾಗಿದೆ.

ಅಂಬಳಿ ಗ್ರಾಮದ ದೇವಾಲಯಗಳ ಮೇಲೆ ಕರ್ನಾಟಕದಲ್ಲಿ ಆಳ್ವಿಕೆ ಮಾಡಿದ ರಾಜಮನೆತನಗಳ ವಾಸ್ತುಶಿಲ್ಪದ ಪ್ರಭಾವವೂ ಬೀರಿದೆ ಎನ್ನಬಹುದು, ಈ ದೇವಾಲಯ ವಾಸ್ತುಶಿಲ್ಪಕ್ಕೆ ಸಂಬಂಧಿಸಿದಂತೆ ಶೈವ, ವೈಷ್ಣವ ಹಾಗೂ ಶಾಕ್ತಮತ ಪಂಥಗಳಿಗೆ ಸಂಬಂಧಿಸಿದಂತೆ ದೇವಾಲಯಗಳು ಹಾಗೂ ಮೂರ್ತಿಶಿಲ್ಪ ಕಂಡುಬರುತ್ತಿದ್ದು ಅವುಗಳೆಲ್ಲವೂ ಕಲ್ಯಾಣ ಚಾಲುಕ್ಯರ, ವಿಜಯನಗರ, ವಿಜಯನಗರೋತ್ತರ ಮತ್ತು ೨೦ನೇ ಶತಮಾನದಲ್ಲಿ ನಿರ್ಮಾಣ ಗೊಂಡಿವೆ, ಇಲ್ಲಿನ ದೇವಾಲಯಗಳು ಅಳಿವಿನ ಅಂಚಿನಲ್ಲಿರುವುದರಿಂದ ಮರದ ಕಟ್ಟಿಗೆಯಿಂದ ಕಟ್ಟಿರುವುದು, ಸ್ಥಳೀಯರು ಅವುಗಳನ್ನು ಜೀರ್ಣೋದ್ಧಾರ ಗೊಳಿಸಿದ್ದಾರೆ. ಇದರಿಂದ ಆ ದೇವಾಲಯದ ಮೂಲ ಸ್ವರೂಪಕ್ಕೆ ಧಕ್ಕೆಯಾಗಿದೆ ಎನ್ನಲಾಗಿದೆ. ಇಲ್ಲಿನ ಶೈವ, ವೈಷ್ಣವ ಹಾಗೂ ಶಾಕ್ತ ದೇವಾಲಯಗಳೆಲ್ಲವೂ ಒಂದೇ ರೀತಿಯ ರಚನೆಯನ್ನು ಹೊಂದಿಲ್ಲ, ಬದಲಾಗಿ ಒಂದಕ್ಕಿಂತ ಒಂದು ವಿಶೇಷವಾಗಿ ರಚಿತಗೊಂಡಿರುವುದು ಕಂಡುಬಂದಿವೆ.

ಅಂಬಳಿಯ ಶೈವ ದೇವಾಲಯಗಳಲ್ಲಿ ಹೆಚ್ಚಾಗಿ ಶಿವಾಲಯಗಳಿದ್ದು ಎಲ್ಲವೂ ಗರ್ಭಗೃಹ ಮತ್ತು ಸಭಾ ಮಂಟಪವನ್ನು ಹೊಂದಿದ್ದು ಕೆಲವು ಮಾತ್ರ ಗರ್ಭಗೃಹದ ಮುಂದೆ ಅಂತರಾಳವಿರುವುದು ಕಂಡುಬರುತ್ತದೆ. ಸಭಾಮಂಟಪದಲ್ಲಿ ಗರ್ಭಗುಡಿಯು ಶಿವಲಿಂಗಕ್ಕೆ ಅಭಿಮುಖವಾಗಿ ಶಿವನ ವಾಹನವಾದ ನಂದಿಯನ್ನು ಕಾಣುತ್ತೇವೆ. ಆದರೆ ರಾಮಲಿಂಗೇಶ್ವರ ದೇವಾಲಯದಲ್ಲಿ ಶಿವಲಿಂಗ ಮಾತ್ರವಿದ್ದು, ನಂದಿಯು ಕಾಣಿಸಿಗುವುದಿಲ್ಲ. ಶೈವ ದೇವಾಲಯಗಳು ಪೂರ್ವಾಭಿಮುಖವಾಗಿ ನಿರ್ಮಾಣ ಗೊಂಡಿವೆ, ಕಲ್ಯಾಣ ಚಾಲುಕ್ಯರ ಕಾಲದ ದೇವಾಲಯದಲ್ಲಿ ಅತಿ ಸೂಕ್ಷ್ಮ ಕೆತ್ತನೆಗಳು ಕಂಡುಬಂದಿದ್ದು ಗರ್ಭಗೃಹದ ಬಾಗಿಲವಾಡವು ಅರ್ಧಗಂಬ, ಹೂ-ಬಳ್ಳಿ, ತೋರಣಗಳಿಂದ ಅಲಂಕರಗೊಂಡಿರುವುದು, ಇಕ್ಕೆಲಗಳಲ್ಲಿ ದ್ವಾರಪಾಲಕರು ವಿವಿಧ ಆಭರಣಗಳಿಂದ ದೇವತೆಯ ರೀತಿಯಲ್ಲಿ ಅಲಂಕಾರ ಗೊಂಡಿರುವುದು ಮಹತ್ತರವಾಗಿವೆ. ಸಭಾ ಮಂಟಪದ ಕಂಬಗಳ ಮೇಲೆ ಹೂಗಳಿಂದ ಕಂಗೊಳಿಸುತ್ತವೆ. ಕಂಬದ ಇಕ್ಕೆಲಗಳಲ್ಲಿ ಬ್ರಹ್ಮ, ವಿಷ್ಣು, ಸರಸ್ವತಿ, ಗಣಪತಿ, ಕೇಶವ, ಸೂರ್ಯಗಳ ಉಬ್ಬುಶಿಲ್ಪಗಳು ಇರುವುದು ವಿಶೇಷವಾಗಿ ಕಂಡುಬರುತ್ತವೆ.

ವೈಷ್ಣವ ದೇವಾಲಯಗಳಲ್ಲಿ ಆಂಜನೇಯ ದೇವಾಲಯಗಳೇ ಹೆಚ್ಚಿನ ಪ್ರಮಾಣದಲ್ಲಿ ಇರುವುದು ಕಾಣುತ್ತೇವೆ. ಊರಿಗೆ ಒಂದು ಹನುಮಂತ ದೇವಾಲಯವಿರುವುದು ಹಾಗೂ ಆ ದೇವಾಲಯಗಳೆಲ್ಲವೂ ದಕ್ಷಿಣಾಭಿಮುಖವಾಗಿ ನಿರ್ಮಾಣಗೊಂಡಿರುವುದು ಸರ್ವೇಸಾಮಾನ್ಯ, ಆದೇ ರೀತಿಯಲ್ಲಿ ವಿಜಯನಗರ ಕಾಲದ ದೇವಾಲಯವು ಅಂಬಳಿ ಗ್ರಾಮದಲ್ಲಿ ಕಂಡುಬಂದಿದ್ದು ಈ ದೇವಾಲಯವು ಇತ್ತೀಚಿನ ಕಾಲದಲ್ಲಿ ಜೀರ್ಣೋದ್ಧಾರವಾಗಿದೆ. ಶಾಕ್ತ ದೇವಾಲಯಗಳು ಕೇವಲ ಗರ್ಭಗುಡಿಯನ್ನು ಮಾತ್ರ ಒಳಗೊಂಡಂತಹ ಒಂದು ಅಂಕಣದ ಚಿಕ್ಕ ಗುಡಿಗಳಾಗಿದ್ದು, ಅವು ಇತ್ತೀಚಿನ ಕಾಲಘಟ್ಟದ್ದಾಗಿವೆ.

ಅಂಬಳಿ ಸ್ಥಳೀಯ ಇತಿಹಾಸದ ರಚನೆಯಲ್ಲಿ ಶಾಸನಗಳು ಹಾಗೂ ಶಾಸನಶಿಲ್ಪ ಪಾತ್ರ ಅತಿಮುಖ್ಯವಾಗಿವೆ. ಕಲ್ಯಾಣ ಚಾಲುಕ್ಯರ ಶಾಸನಗಳೆ ಕಂಡುಬರುವುದರಿಂದ ದಾನ ನೀಡಿರುವುದು, ದೇವಾಲಯ ನಿರ್ಮಿಸಿರುವುದು, ಕೆರೆಯ ಜೀರ್ಣೋದ್ಧಾರ, ತೆರಿಗೆ ರದ್ದುಪಡಿಸಿರುವುದು, ಭೂದಾನ ಮಾಡಿರುವುದು, ಮಹಾಜನರ ಪಾದಪೂಜೆ ಮಾಡಿರುವುದು ಶಾಸನಗಳಲ್ಲಿ ಉಲ್ಲೇಖಗಳಿವೆ. ಹಾಗೇ ಶಾಸನ ಶಿಲ್ಪಗಳೆಂದು ಕರೆಯುವ ವೀರಗಲ್ಲು, ತುರುಗೋಳ್, ಪೆಣ್ಬುಯ್ಯಲ್, ವೀರಮಾಸ್ತಿಗಲ್ಲುಗಳು ಒಂದು ಕಾಲದಲ್ಲಿ ಈ ಪ್ರದೇಶದ ಜನತೆಯಲ್ಲಿದ್ದ ಸ್ವಾಮಿ ನಿಷ್ಠೆ, ಪರಾಕ್ರಮ, ವೀರತ್ವ, ಹೋರಾಟದ ಮನೋಭಾವ ಹಾಗೂ ತ್ಯಾಗ, ಪತಿವ್ರತೆ, ಆದರ್ಶವೊಂದರ ಪರಂಪರೆಯನ್ನು ಸಾರುವ ಪ್ರತೀಕಗಳಾಗಿವೆ. ಆದರೆ ಪ್ರಸ್ತುತ ದಿನಮಾನಗಳಲ್ಲಿ ಸ್ಥಳೀಯ ಜನರಲ್ಲಿ ಅವುಗಳ ಕುರಿತಾದ ಪ್ರಜ್ಞೆಯಿಲ್ಲದ ಕಾರಣದಿಂದ ನಿಧಿಯ ಆಸೆಯಿಂದ ಭಗ್ನಗೊಂಡು ಹಾಳಾಗಿ ಹೋಗುತ್ತಿರುವುದು ಒಂದು ದುರಂತವೇ ಆಗಿದೆಯೆನ್ನಬಹುದು. ಈ ಶಾಸನ ಶಿಲ್ಪ ಮತ್ತು ಮೂರ್ತಿಶಿಲ್ಪಗಳನ್ನು ಸಂರಕ್ಷಿಸಿದರೇ ಅದೇ ನಾವು ಮನುಕುಲಕ್ಕೆ ಮುಂದಿನ ಪೀಳಿಗೆಗೆ ಕೊಡುವ ಕೊಡುಗೆ ಎಂಬ ಭಾವನೆ ಸ್ಥಳೀಯರಲ್ಲಿ ಮೂಡಿಸಿದರೆ ಅವುಗಳ ನಾಶವನ್ನು ತಡೆಯ ಬಹುದೆನಿಸುತ್ತದೆ.

ಅಂಬಳಿ ಗ್ರಾಮದ ಚರಿತ್ರೆ ಮತ್ತು ಸಂಸ್ಕೃತಿಯನ್ನೊಳಗೊಂಡ ಸ್ಥಳೀಯ ಇತಿಹಾಸದ ರಚನೆಯಲ್ಲಿ ಮೌಖಿಕ ಆಕರಗಳ ನೆರವು ಸಹ ಪ್ರಮುಖವಾಯಿತು ಈ ನಿಟ್ಟಿನಲ್ಲಿ ಇಲ್ಲಿನ ದೇವತೆಗಳ ದೇವಾಲಯಗಳ ಮೂರ್ತಿಶಿಲ್ಪಗಳ ಸ್ಥಳನಾಮ ಮೊದಲಾದವುಗಳ ಕುರಿತಾದ ಐತಿಹ್ಯಗಳು ಸಹಕಾರಿಯಾದವು ಹಾಗೆಯೇ ಮಾನವನು ತನ್ನ ಜೀವಿತದುದ್ದಕ್ಕೂ ಹಲವಾರು ನಂಬಿಕೆ ಆಚರಣೆಗಳನ್ನು ಪಾಲಿಸುವುದರ ಜೊತೆಗೆ ತನ್ನ ವಿಶ್ರಾಂತಿಗಾಗಿ ಮನೋರಂಜನೆಗಾಗಿ ಅನೇಕ ರೀತಿಯ ಹಬ್ಬಹರಿದಿನಗಳನ್ನು ಸಾಂಪ್ರದಾಯ ಬದ್ಧವಾಗಿ ಆಚರಿಸಿಕೊಂಡು ಬರುವುದರ ಹಿಂದೆ ಅಡಗಿರುವ ಚರಿತ್ರೆಯನ್ನು ಅರಿಯಲಾಯಿತು ಅಷ್ಟೆ ಅಲ್ಲದೇ ಮೇಲು-ಕೀಳು, ಬಡವ-ಶ್ರೀಮಂತ, ಪುರುಷ-ಸ್ತ್ರೀ ಎಂಬ ಯಾವುದೇ ರೀತಿಯ ತಾರತಮ್ಯವಿಲ್ಲದೆ. ಸಾಮೂಹಿಕವಾಗಿ ನಡೆಸಿಕೊಂಡು ಬರುವಂತಹ ಜಾತ್ರೆಗಳು ಇಲ್ಲಿನ ಸಂಸ್ಕೃತಿಯ ಒಂದು ಭಾಗವೇ ಆಗಿದೆ ಎಂಬ ಅಂಶ ಅಧ್ಯಯನದಿಂದ ಕಂಡು ಕೊಂಡಿದರಿಂದ ಇಲ್ಲಿನ ಸಾಂಸ್ಕೃತಿಕ ಪರಂಪರೆಯನ್ನು ಅರಿಯಲು ಅನುಕೂಲವಾಗಿದೆ.

ಪ್ರಸ್ತುತ ಅಧ್ಯಯನದ ಗ್ರಾಮದಲ್ಲಿ ಹಿಂದಿನಿಂದಲೂ ನಡೆದು ಬಂದ ಆಚರಿಸಿಕೊಂಡು ಹೋಗುವ ಅನೇಕ ನಂಬಿಕೆ, ಆಚರಣೆಗಳು, ಜಾತ್ರೆ, ಹಬ್ಬ-ಹರಿದಿನಗಳು ಇಂದಿಗೂ ಪ್ರಸ್ತುತದಲ್ಲಿವೆ

ಉದಾಹರಣೆ; ಕಲ್ಲೇಶ್ವರ ದೇವರ ಜಾತ್ರೆ, ದುರ್ಗಾಂಭಿಕಾ ದೇವಿಯ ಜಾತ್ರೆ ಮಾತ್ರ ಇಲ್ಲಿ ಹೇಳಲಾಗಿದೆ. ಜೊತೆಗೆ ವಿವಾಹಕಾರ್ಯ, ಕೃಷಿ ಆಚರಣೆಗಳು, ಹಬ್ಬಗಳು ಅವುಗಳಲ್ಲಿ ಯುಗಾದಿ, ಶಿವರಾತ್ರಿ, ದೀಪಾವಳಿ, ಗಣೇಶ ಆಚರಣೆಯ ವಿಧಿ-ವಿಧಾನಗಳ ಪರಿಚಯ ಅವುಗಳಿಗೆ ಸಂಬಂಧಿಸಿದ ಅದಕ್ಕೆ ಅನುಗುಣವಾಗಿ ಸ್ಥಳೀಯರಿಂದ ಪಡೆದ ಮಾಹಿತಿ ವಿವರ, ಶಾಸನ ವೀರಗಲ್ಲು ಹಾಗೆ ಪ್ರಾಗಿತಿಹಾಸ, ಚಾರಿತ್ರಿಕ, ಧಾರ್ಮಿಕ, ಹಬ್ಬ-ಆಚರಣೆ ನಂಬಿಕೆ ಕುರಿತು ಸೂಕ್ತ ಗ್ರಂಥಗಳ ಅಭ್ಯಾಸಿಸಿ ವ್ಯವಸ್ಥಿತ ಮಾಹಿತಿ ನೀಡುವ ಕೆಲಸ ಅಂಬಳಿ ಗ್ರಾಮಮಟ್ಟದಲ್ಲಿ ಪ್ರಥಮಬಾರಿಗೆ ಮಾಡಲಾಗಿದೆ. ಇದೊಂದು ಸಂಶೋಧನಾ ವಿಷಯ ಸಮರ್ಥನೆಗಾಗಿ ಸಾಧ್ಯವಾದಷ್ಟು ಒಂದು ವರ್ಷದ ಅಭ್ಯಾಸದ ಅಧ್ಯಯನ ಅವಧಿಯಲ್ಲಿ ವಸ್ತುನಿಷ್ಠವಾಗಿ, ವಿಷಯಕ್ಕನುಗುಣವಾಗಿ ಪ್ರಯತ್ನಿಸಲಾಗಿದೆ. ಹಾಗೆಯೇ ವಾಸ್ತುಶಿಲ್ಪ, ದೇವಾಲಯ, ಶಾಸನ, ವೀರಗಲ್ಲು, ಕೆರೆಗಳ ಸಮಗ್ರ ಚಿತ್ರಣವನ್ನು ನೀಡಲಾಗಿದೆ. ಇಲ್ಲಿ ನೀಡಲಾದ ಎಲ್ಲಾ ಮಾಹಿತಿ ಸೂಕ್ತ ಮಾರ್ಗದರ್ಶನ ಮುಖಾಂತರ ಅಂಬಳಿ ಗ್ರಾಮದ ಸಮಗ್ರ ಚಿತ್ರಣ ನೀಡಲು ಒಂದು ಕಿರು ಪ್ರಯತ್ನ ನನ್ನಿಂದ ಮೂಡಿಬಂದಿದೆ. ಈ ಪ್ರಬಂಧದಲ್ಲಿ ಉಲ್ಲೇಖಿಸಿರುವ ಅಂಬಳಿ ಗ್ರಾಮದ ಸ್ಥಳದಲ್ಲಿ ಅಧ್ಯಯನ ಕೈಗೊಂಡು ಇದಕ್ಕೆ ಪೂರಕವೆಂಬಂತೆ ಸ್ವಂತ ಅಭಿಪ್ರಾಯವನ್ನು ನೀಡುತ್ತಾ ನನ್ನ ಕಿರುಪ್ರಬಂಧ ರಚಿಸಲಾಗಿದೆ.

ಈ ಪ್ರಬಂಧಕ್ಕೆ ಪೂರಕ ಆಕರಗಳಾದ ನಕಾಶೆ, ವಕ್ತೃವಿವರ, ದೇವಾಲಯ ನೀಲನಕ್ಷೆ(ತಲವಿನ್ಯಾಸ) ಛಾಯಚಿತ್ರ ಹಾಗೂ ಆಕರ ಗ್ರಂಥಗಳ ಪಟ್ಟಿಯನ್ನು ಒದಗಿಸಲಾಗಿದೆ.

# ಅನುಬಂಧಗಳು

## ೧ ಪರಾಮರ್ಶನ ಗ್ರಂಥಗಳು:


ಅಪರ್ಣ ಕೂ.ಸ., ೧೯೯೯, *ದೇವಾಲಯ ವಾಸ್ತುಶಿಲ್ಪ ಪರಿಚಯ*, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಕಲಬುರ್ಗಿ ಎಂ.ಎಂ., ೨೦೧೧(ಮರು ಮುದ್ರಣ), *ಸಮಾಧಿ-ಬಲಿದಾನ-ವೀರಮರಣ ಸ್ಮಾರಕಗಳು*, ಪ್ರಕಾಶನ ಸಪ್ನ ಬುಕ್ ಹೌಸ್ ಬೆಂಗಳೂರು.

ಕರುಣಾ ವಿಜಯೇಂದ್ರ, ೨೦೦೮, *ಕಲ್ಯಾಣ ಚಾಲುಕ್ಯ ಶಿಲ್ಪಕಲೆ*, ಕರ್ನಾಟಕ ಶಿಲ್ಪಕಲಾ ಅಕಾಡೆಮಿ, ಬೆಂಗಳೂರು.

ಕರಿಬಸಪ್ಪ ಎ., ೨೦೦೯, *ಬಳ್ಳಾರಿ ಜಿಲ್ಲೆಯ ಐತಿಹ್ಯಗಳು*, ಸಾಯಿಮಣಿ ಪ್ರಕಾಶನ, ಹೊಸಪೇಟೆ.

ಕೊಟ್ರೇಶ ಎಂ., ೨೦೧೧, *ಬಳ್ಳಾರಿ ಜಿಲ್ಲೆಯ ಕೋಟೆಗಳು*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಗಿಲ್ಬರ್ಟ್ ಸಿಕ್ವೇರಾ, ೨೦೦೪, *ಪೂರ್ವ ಪ್ರಾಚೀನ ಭಾರತದ ಇತಿಹಾಸ*, ಚೇತನ್ ಬುಕ್ ಹೌಸ್, ಬೆಂಗಳೂರು.

ಗುರುಮೂರ್ತಿ ಪೆಂಡರೂರು, ೨೦೦೬, *ಬಳ್ಳಾರಿ ಜಿಲ್ಲೆಯ ಸ್ಥಳನಾಮಗಳು*, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು.

ಚನ್ನಬಸವೇಶ್ವರ ಸಿ.ವ., ೧೯೭೮, *ಬಳ್ಳಾರಿ ಜಿಲ್ಲೆ ದರ್ಶನ*, ಐ.ಬಿ.ಹೆಚ್. ಪ್ರಕಾಶನ, ಬೆಂಗಳೂರು.

ಚಂದ್ರಶೇಖರ್ ಟಿ.ಆರ್., ೧೯೯೪, *ಬಳ್ಳಾರಿ ಜಿಲ್ಲೆಯ ನಿಸರ್ಗ ಸಂಪತ್ತು*, ಶ್ರೀಸಿದ್ದವೀರ ಶಿವಾಚಾರ್ಯ ಜ್ಞಾನ ಪ್ರಕಾಶನ, ಹೂವಿನಹಡಗಲಿ.

ಚಿದಾನಂದಮೂರ್ತಿ ಎಂ., ೧೯೯೧, *ಕರ್ನಾಟಕ ಸಂಸ್ಕೃತಿ*, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು.

ಚಿದಾನಂದಮೂರ್ತಿ ಎಂ., ೨೦೦೨, *ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ*, ಸ್ವಪ್ನ ಬುಕ್ ಹೌಸ್, ಬೆಂಗಳೂರು.

ಚೆನ್ನಸ್ವಾಮಿ ಸೋಸಲೆ ಎನ್., ೨೦೦೪, *ಸಾಮ್ರಾಜ್ಯ ಮತ್ತು ಸಂಸ್ಥಾನ*, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಚಿದಾನಂದ ಮೂರ್ತಿ ಎಂ., ೧೯೮೪, *ವೀರಗಲ್ಲುಗಳು ಮತ್ತು ಮಾಸ್ತಿಕಲ್ಲುಗಳು*, ಪ್ರಕಾಶನ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಬೆಂಗಳೂರು.

ಚೆನ್ನಬಸಪ್ಪ ಎಸ್. ಪಾಟೀಲ, ವಿನೋದಾ ಪಾಟೀಲ, ೧೯೯೭ *ಬಳ್ಳಾರಿ ಜಿಲ್ಲೆಯ ಶಾಸನಗಳು*, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು.

ದೇವರ ಕೊಂಡಾರೆಡ್ಡಿ, (ಸಂ), ೧೯೯೮, *ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೧* ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ದೇವರ ಕೊಂಡಾರೆಡ್ಡಿ (ಸಂ) ಕಲವೀರ ಮನ್ವಾಚಾರ್, ಭಟ್‌ಸೂರಿ ಕೆ.ಜಿ., ಪರಮಶಿವಮೂರ್ತಿ ಡಿ.ವಿ., (ಸ.ಸಂ), ೧೯೯೮, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೧ ಬಳ್ಳಾರಿ ಜಿಲ್ಲೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ನಾಗಯ್ಯ ಜೆ.ಎಂ., ೧೯೯೧, *ಬಳ್ಳಾರಿ ಜಿಲ್ಲೆಯ ಶಾಸನಗಳು*, ಪ್ರಸಾರಾಂಗ ಗುಲಬರ್ಗಾ ವಿಶ್ವವಿದ್ಯಾಲಯ, ಕಲಬುರ್ಗಿ.

ಪಂಚಮುಖಿ ಆರ್.ಎಸ್., ೧೯೮೧, *ಕರ್ನಾಟಕದ ಶಾಸನಗಳು*, ಕನ್ನಡ ಸಂಶೋಧನ ಸಂಸ್ಥೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ,

ಪರಮೇಶ್ವರಯ್ಯ ಸೋಪ್ಪಿನಮಠ, ೨೦೦೫, *ಹಗರಿಬೊಮ್ಮನಹಳ್ಳಿ ತಾಲೂಕು ದರ್ಶನ*, ಯುವಕರ ಸಂಘ(ರಿ), ರಾಮನಗರ, ಹಗರಿಬೊಮ್ಮನಹಳ್ಳಿ.

ಪಾಡಿಗಾರ ಶ್ರೀನಿವಾಸ, ೨೦೦೪, *ಭಾರತೀಯ ಇತಿಹಾಸದ ಶಾಸನ ಆಕರಗಳು*, ರಾಮಾಶ್ರಯ ಪಬ್ಲಿಕೇಶನ್ಸ್, ಧಾರವಾಡ.

ಪಾಡಿಗಾರ ಶ್ರೀನಿವಾಸ, ೧೯೯೭, *ಪುರಾತತ್ವಶಾಸ್ತ್ರ ಪರಿಚಯ*, ರಾಮಾಶ್ರಯ ಪಬ್ಲಿಕೇಶನ್ಸ್, ಧಾರವಾಡ.

ಪ್ರಭಾಕರ್ ಎಂ.ಎನ್., ೨೦೧೧ *ದೇವಾಲಯ ವಾಸ್ತು*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಭಟ್‌ಸೂರಿ ಕೆ.ಜಿ., ೨೦೦೯, *ಕರ್ನಾಟಕ ಶಾಸನ ಸಂಶೋಧನೆ*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಮಂಜನಾಯ್ಕ ಆರ್., ೨೦೧೬, *ಚನ್ನಗಿರಿ ತಾಲೂಕಿನ ಪುರಾತತ್ವ ಅವಶೇಷಗಳು*, ಪ್ರಭುದೇವರ ಜನಕಲ್ಯಾಣ ಸಂಸ್ಥೆ, ಶ್ರೀಪ್ರಭುದೇವರ ಸಂಸ್ಥಾನ ವಿರಕ್ತಮಠ, ಸಂಡೂರು.

ಮಜುಂದಾರ್ ಆರ್.ಸಿ., (ಸಂ), ೧೯೯೯, *ಭಾರತೀಯ ಜನತೆಯ ಇತಿಹಾಸ ಮತ್ತು ಸಂಸ್ಕೃತಿ ಸಂಪುಟ-೭*, ಭಾರತೀಯ ವಿದ್ಯಾಭವನ, ಬೆಂಗಳೂರು.

ಮನೋಜ್ ಜಿ., ೨೦೧೫, *ದೇವಾಲಯ ವಾಸ್ತು ವಿಜ್ಞಾನ ಶಾಸ್ತ್ರಗಳ ಹಿನ್ನೆಲೆಯಲ್ಲಿ*, ಸುಬೋಧಿನಿ ಬುಕ್ ಪಬ್ಲಿಷರ್ಸ್ ಮತ್ತು ನಾಲೆಡ್ಜ್ ಅಕಾಡೆಮಿ, ಚಿತ್ರದುರ್ಗ.

ಮಹದೇವ ಸಿ., ೨೦೦೨, ಬಳ್ಳಾರಿ ಜಿಲ್ಲೆಯ ಮರದ ವಾಸ್ತು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ರಮೇಶನಾಯಕ್, (ಸಂ), ೨೦೦೭, *ಕರ್ನಾಟಕ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನಗಳ ಮರು ಚಿಂತನೆ*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ರಾಜಶೇಖರ್ ಎಸ್.ಕೆ., ೧೯೭೫, *ಮೂರ್ತಿಶಿಲ್ಪ ನೆಲೆ-ಹಿನ್ನೆಲೆ*, ಸುಜಾತ ಪಬ್ಲಿಕೇಶನ್ಸ್, ಧಾರವಾಡ.

ಲಕ್ಷ್ಮಣ್ ತೆಲಗಾವಿ, ೨೦೦೪, *ಮೌರ್ಯ ಮತ್ತು ಶಾತವಾಹನ ಯುಗ*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ವಾಸುದೇವ ಬಡಿಗೇರ, ೨೦೧೨, *ಬಳ್ಳಾರಿ ಪರಿಸರದ ಸಾಂಸ್ಕೃತಿಕ ಪರಂಪರೆ ಭಾಗ-೧*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೪, *ಬಳ್ಳಾರಿ ಜಿಲ್ಲೆಯ ಪಾಳೆಯಗಾರರು*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೬, *ಚಿನ್ನಹಗರಿ ಸಿರಿ*, ಚಿನ್ನಹಗರಿ ಪ್ರಕಾಶನ, ಪೂಜಾರಹಳ್ಳಿ.

ಶಿವತಾರಕ್ ಕೆ.ಬಿ., ೨೦೦೧, *ಕರ್ನಾಟಕ ಪುರಾತತ್ವ ನೆಲೆಗಳು*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಶೇಠ ಬಿ.ಎಸ್., ೧೯೯೧, *ಕರ್ನಾಟಕದಲ್ಲಿ ಸತಿ ಪದ್ಧತಿ*, ವೀರಶೈವ ಅಧ್ಯಯನ ಅಕಾಡೆಮಿ, ಶ್ರೀನಾಗನೂರು ರುದ್ರಾಕ್ಷಿ ಮಠ, ಬೆಳಗಾವಿ.

ಶೇಷಶಾಸ್ತ್ರಿ ಆರ್., ೨೦೦೪, *ಕರ್ನಾಟಕ ವೀರಗಲ್ಲುಗಳು*, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು.

ಶೇಖರಾಚಾರಿ, ೨೦೧೬, *ಕೋಗಳಿ ಒಂದು ಪರಿಚಯ*, ಗಾಯಿತ್ರಿ ಪ್ರಕಾಶನ, ಬಳ್ಳಾರಿ.

ಸುಂದರ ಅ., ೧೯೭೩, *ಇತಿಹಾಸ ಪೂರ್ವ ಕರ್ನಾಟಕ ಅಥವಾ ಕರ್ನಾಟಕ ಪ್ರಾಗೈತಿಹಾಸ*, ಐ.ಬಿ.ಹೆಚ್. ಪ್ರಕಾಶನ, ಬೆಂಗಳೂರು.

ಸುಂದರ ಅ., ೧೯೮೮, *ಪ್ರಾಚ್ಯವಸ್ತು ಸಂಶೋಧನೆ*, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಸುರೇಶ್ ಕೆ.ಎಂ., ವಾಸುದೇವ ಬಡಿಗೇರ, ಮಾಡಲಗೇರಿ ಕೊಟ್ರೇಶ್, ಸೋಮಶೇಖರ್ ಎಸ್.ವೈ., ೧೯೯೯, *ಕರ್ನಾಟಕ ದೇವಾಲಯ ಕೋಶ: ಬಳ್ಳಾರಿ ಜಿಲ್ಲೆ*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಸೂರ್ಯನಾಥ ಯು ಕಾಮತ್, ೧೯೮೪, *ಕರ್ನಾಟಕ ರಾಜ್ಯ ಗೆಜೆಟಿಯರ್*, ಮೂರು ಸಂಪುಟಗಳು ಕರ್ನಾಟಕ ಸರ್ಕಾರ, ಬೆಂಗಳೂರು.

ಸೋಮಶೇಖರ್ ಎಸ್.ವೈ., ೨೦೧೪, *ಕರ್ನಾಟಕದ ಬಿರುದಾವಳಿಗಳು*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಸೋಮಶೇಖರ ಎಸ್.ವೈ., ೨೦೦೯, ವಿಜಯನಗರ ಕಾಲದ ಸೈನ್ಯ ವ್ಯವಸ್ಥೆ ಮತ್ತು ಯುದ್ಧ ನೀತಿ, ಸಂಚಿಕೆ ಪ್ರಕಾಶನ, ಚಿತ್ರದುರ್ಗ.

ಹಿರಿಯಣ್ಣ ಅಂಬಳಿಕೆ, ೨೦೦೯, ಕನ್ನಡ ವಿಷಯ ವಿಶ್ವಕೋಶ ಇತಿಹಾಸ ಮತ್ತು ಪುರಾತತ್ವ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿಶ್ವವಿದ್ಯಾಲಯ, ಮೈಸೂರು.

## English Books

*Bellary district Gezateer*, 2004, Karnataka Government, Bangalore.

Chennabasappa S. Patel, 1997, *Inscription of Bellary Districts.*

Gururaja Rao B.K., 1972, *The megalithic Culture in South India*, University of Mysore.

Narasimha murthy (Ed), 1978, *Archaeology of Karnataka,* vidyasagara printing press, Mysore.

## ಎಂ.ಫಿಲ್. ಅಪ್ರಕಟಿತ ಸಂಪ್ರಬಂಧಗಳು

ತಿಪ್ಪೇಶ್ ಹೆಚ್.ಎಂ., ೨೦೧೫, *ಕೂಡ್ಲಿಗಿ ತಾಲೂಕಿನ ಬೃಹತ್ ಶಿಲಾಯುಗದ ನೆಲೆಗಳು*, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಪ್ರೇಮಾನಂದ ಬಿ., ೨೦೦೭, *ಕೋಗಳಿ ಆಂಜನೇಯ ಸಂಕಥನ,* ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಲೋಕೇಶ ಟಿ., ೨೦೧೫, *ಕೂಡ್ಲಿಗಿ ಹೋಬಳಿ ಪರಿಸರದ ಸಾಂಸ್ಕೃತಿಕ ಅಧ್ಯಯನ,* ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿರುಪಾಕ್ಷಪ್ಪ ಎಂ., ೨೦೧೮, *ಕಾನಾಹೊಸಹಳ್ಳಿ ಗ್ರಾಮದ ಸಾಂಸ್ಕೃತಿಕ ಅಧ್ಯಯನ,* ಕನ್ನಡ ವಿಶ್ವವಿದ್ಯಾಲಯ, ಹಂಪಿ.

## ಅಪ್ರಕಟಿತ ಪಿ.ಎಚ್.ಡಿ. ಮಹಾಪ್ರಬಂಧಗಳು

ಕರಿಬಸಪ್ಪ ಎ., ೨೦೦೨, *ಕೋಟೆ-ಕೊತ್ತಲಗಳು : ಒಂದು ಅಧ್ಯಯನ,* ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಚಾರುಲತಾ ಬಿ.ಟಿ., ೨೦೧೫, *ಬ್ರಹ್ಮಗಿರಿ ಪರಿಸರ: ಸಾಂಸ್ಕೃತಿಕ ಅಧ್ಯಯನ,* ಕನ್ನಡ ವಿಶ್ವವಿದ್ಯಾಲಯ, ಹಂಪಿ.

ತಿಪ್ಪೇಸ್ವಾಮಿ ಡಿ., ೨೦೧೪, *ಕೋಗಳಿ ನಾಡಿನ ಶಾಸನಗಳ: ಒಂದು ಅಧ್ಯಯನ,* ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಮಂಜನಾಯ್ಕ ಆರ್., ೨೦೧೮, ಕೂಡ್ಲಿಗಿ ಮತ್ತು *ಹಗರಿಬೊಮ್ಮನಹಳ್ಳಿ ತಾಲೂಕುಗಳ ಪುರಾತತ್ವೀಯ ಅಧ್ಯಯನ,* ಕುವೆಂಪು ವಿಶ್ವವಿದ್ಯಾಲಯ, ಶಂಕರಘಟ್ಟ.

## ೨ ವಕ್ತೃ ವಿವರ

| ಕ್ರ.ಸಂ. | ಹೆಸರು | ವಯಸ್ಸು | ಗ್ರಾಮ | ಹುದ್ದೆ |
|---|---|---|---|---|
| ೧. | ಪಿ. ಕೊಟ್ರಬಸಪ್ಪ | ೫೮ | ಅಂಬಳಿ | ಅರ್ಚಕರು |
| ೨. | ಕೆ. ಪ್ರಕಾಶ | ೫೦ | ಅಂಬಳಿ | ವಕೀಲ |
| ೩. | ಷಡಕ್ಷರಪ್ಪ | ೬೨ | ಅಂಬಳಿ | ಮಾಜಿ ನಿರ್ದೇಶಕರು, ವಿ.ವಿ.ಸಂಘ |
| ೪. | ನಾಗಯ್ಯ ಎ.ಎಂ. | ೫೪ | ಅಂಬಳಿ | ಕೂಲಿ |
| ೫. | ಮಂಜುನಾಥ ಎಸ್. | ೩೫ | ಅಂಬಳಿ ಕ್ಯಾಂಪ್ | ಡ್ರೈವರ್ |
| ೬. | ಪ್ರಭುದೇವ ಎಂ. | ೫೪ | ಅಂಬಳಿ | ವ್ಯವಸಾಯ |
| ೭. | ರವೀಂದ್ರಯ್ಯ ಎಂ.ಎಂ. | ೫೬ | ಅಂಬಳಿ | ಕೂಲಿ |
| ೮. | ಮಂಜುನಾಥ | ೩೫ | ಅಂಬಳಿ | ವ್ಯವಸಾಯ |
| ೯. | ಕೆ.ಪಿ. ಕೊಟ್ರೇಶ | ೪೦ | ಕೊಟ್ಟೂರು | ಮುಖ್ಯಶಿಕ್ಷಕರು |
| ೧೦. | ಬಿ. ಕೊಟ್ರಪ್ಪ | ೭೨ | ಅಂಬಳಿ | ಹಿರಿಯರು |
| ೧೧. | ಎಚ್. ಮಂಜುನಾಥಗೌಡ | ೪೭ | ಅಂಬಳಿ | ವ್ಯಾಪಾರಿ (ಐ.ಟಿ.ಸಿ) |
| ೧೨. | ಬಾಲನಗೌಡ್ರು ಗುರುಬಸವನಗೌಡ | ೮೮ | ಅಂಬಳಿ | ಹಿರಿಯರು |
| ೧೩. | ಶಶಿಧರ | ೪೦ | ಅಂಬಳಿ | ವ್ಯವಸಾಯ |
| ೧೪. | ಸಿದ್ಧಕಲಿಸಾಬ | ೫೮ | ಅಂಬಳಿ | ಕಟ್ಟಡ ಕಾರ್ಮಿಕ |
| ೧೫. | ಕೆ. ಕಲ್ಲೇಶ | ೪೭ | ಅಂಬಳಿ | ವ್ಯವಸಾಯ |
| ೧೬. | ಕುಂಬಾರ ಶಾಂತಪ್ಪ | ೫೦ | ಅಂಬಳಿ | ವ್ಯವಸಾಯ |

೩. ತಲ ನಕ್ಷೆ

## ಕಲ್ಲೇಶ್ವರ ದೇವಾಲಯದ ತಲನಕ್ಷೆ



## ೪ ನಕ್ಷೆ ಮತ್ತು ಛಾಯಾಚಿತ್ರಗಳು

### ಕರ್ನಾಟಕ ರಾಜ್ಯ ನಕ್ಷೆ



# ಬಳ್ಳಾರಿ ಜಿಲ್ಲಾ ನಕ್ಷೆ


BELLARY
MAP
RAICHUR
KOPPAL
GADAG
HAVERI
DEVANGERE
CHITTRADURGA
ANDHRA
PRADESH
Kampi
Sanavasapura
Upparahalli
HOSPET
Gunda Road
Torangallu
Sidaragadda
BALLARI
Belagal
Rupanagudi
SANDUR
Rajapur
Mallanakere
BOMMANAHALLI
HUVVINAHADAGALLI
Mahajanahalli
Doopadahalli
KUDLIGI
Svamihalli
Holalu
Kotturu
Halsagara
Nibalageri
Huralihalu
Kunganur
LEGEND
River
District Boundary
State Boundary
District HQ
Other Town
Major Town
Map not to Scale
Copyright © 2014 www.mapsofindia.com
(Updated on 17th November 2014)

## ಕೊಟ್ಟೂರು ತಾಲೂಕ ನಕ್ಷೆ




**ಕೊಟ್ಟೂರು ಹೊಸ ತಾಲೂಕು ನಕ್ಷೆ**



ಕಲ್ಲೇಶ್ವರ ದೇವಾಲಯ, ಅಂಬಳಿ



ಕಲ್ಲೇಶ್ವರ ದೇವಸ್ಥಾನದ ಗರ್ಭಗೃಹ, ಅಂಬಳಿ



ರಾಮಲಿಂಗೇಶ್ವರ ದೇವಾಲಯ, ಅಂಬಳಿ



ರಾಮಲಿಂಗೇಶ್ವರ ದೇವಸ್ಥಾನದ ಗರ್ಭಗೃಹದಲ್ಲಿರುವ ಶಿವಲಿಂಗ

ಆಂಜನೇಯ ದೇವಸ್ಥಾನ, ಅಂಬಳಿ





ಆಂಜನೇಯ
ದೇವಸ್ಥಾನದ
ಮಹಾದ್ವಾರ, ಅಂಬಳಿ

ಆಂಜನೇಯ ಮೂರ್ತಿ, ಅಂಬಳಿ



ದುರ್ಗಾಂಬಿಕಾ ದೇವಸ್ಥಾನ,
ಅಂಬಳಿ





ದುರ್ಗಾಂಬಿಕಾ ಮೂರ್ತಿ, ಅಂಬಳಿ

ದುರ್ಗಾಂಬಿಕ ದೇವಸ್ಥಾನ
ಪ್ರಾಂಗಣದಲ್ಲಿರುವ ಪಾದಗಟ್ಟೆ,





ಡೋಣೆ ಕೆಂಚಮ್ಮ ದೇವಸ್ಥಾನ, ಅಂಬಳಿ



ಡೋಣೆ ಕೆಂಚಮ್ಮನ ಮೂರ್ತಿ, ಅಂಬಳಿ



ಬಸವಣ್ಣ ದೇವಸ್ಥಾನದ ಒಳಾಂಗಣ, ಅಂಬ



ಭೈರವ ದೇವರ ಗುಡಿ

ಹೊಸಹಳ್ಳಿ ತೋಟದ ಆಂಜನೇಯ ಮೂರ್ತಿ





ಹೊಸಹಳ್ಳಿ ತೋಟದ,
ಶಿವಲಿಂಗದ ಪಾಣಿಪಿಟ
(ಭರಮಪ್ಪ ದೇವರು)

ಹೊಸಹಳ್ಳಿ ತೋಟದ,
ಆಂಜನೇಯ ದೇವರ ಗುಡ್ಡ



ಪ್ರಾಚೀನ ಕಾಲದ ಚೌಡೇಶ್ವರಿ
ಮೂರ್ತಿ (ಕ್ಯಾಂಪ್) ಅಂಬಳಿ





ಇತ್ತಿಚಿನ
ಚೌಡೇಶ್ವರಿ
ಮೂರ್ತಿ

ಬಸವಣ್ಣ ದೇವಸ್ಥಾನದಲ್ಲಿ ಗಣಪತಿ ಮೂರ್ತಿ





ಕಲ್ಲೇಶ್ವರ ದೇವಾಲಯದಲ್ಲಿ ಸಪ್ತಮಾತೃಕೆಯರ ಶಿಲ್ಪಗಳು



ಕಲ್ಲೇಶ್ವರ ದೇವಾಲಯದ ಸಭಾ ಮಂಟಪದಲ್ಲಿ ಇರುವ ಕಮಲ



ರಾಮಲಿಂಗೇಶ್ವರ
ಗರ್ಭಗೃಹದಲ್ಲಿ ಇರುವ
ಕಮಲದ ಕೋಷ್ಟಕಗಳ



ಯತಿಯ ಶಿಲ್ಪ

# ಶಾಸನಗಳು



ಕಲ್ಲೇಶ್ವರ ದೇವಾಲಯದ
ಎಡಭಾಗದಲ್ಲಿ ಇರುವ ಶಾಸನ



ಕಲ್ಲೇಶ್ವರ ದೇವಾಲಯದ ಬಲಭಾಗದಲ್ಲಿ ಇರುವ ಶಾಸನ



ಕಲ್ಲೇಶ್ವರ ದೇವಾಲಯದ ಸಭಾಮಂಟಪದ ತೊಲೆಯಲ್ಲಿರುವ ಶಾಸನ



ಕಲ್ಲೇಶ್ವರ ದೇವಾಲಯದ ಮುಂದೆ ನೆಲ ಹಾಸಿನಲ್ಲಿರುವ ಶಾಸನ



ಅಪ್ರಕಟಿತ ಶಾಸನ,
ವಿರೂಪಾಕ್ಷಪ್ಪನ ಹೊಲದಲ್ಲಿದೆ.



ಅಪ್ರಕಟಿತ ಲಿಂಗಮುದ್ರೆ ಕಲ್ಲು



ಅಪ್ರಕಟಿತ ಲಿಂಗಮುದ್ರೆ ಕಲ್ಲು

# ವೀರಗಲ್ಲುಗಳು



ತುರುಗೋಳ್ ವೀರಗಲ್ಲು



ತುರುಗೋಳ್ ವೀರಗಲ್ಲು



ತುರುಗೋಳ್ ವೀರಗಲ್ಲು


ತುರುಗೋಳ್ ವೀರಗಲ್ಲು


ಪೆಣ್ಬುಯ್ಯಲ್ ವೀರಗಲ್ಲು


ನಾಗ-ನಾಗಿಣಿ(ತೃಟಿತ) ಶಾಸನ ಶಿಲೆ


ವೀರಮಾಸ್ತಿಗಲ್ಲು

